


ಕಾಯಕವೇ ಕೈಲಾಸ

# ಸಿದ್ಧಗಂಗಾ





ಸಂಪುಟ : ೫೮ ಜುಲೈ ೨೦೨೨ ಸಂಚಿಕೆ : ೦೭





ಜೂನ್ ೨೦ ರಂದು ಮೈಸೂರಿನಲ್ಲಿ ಜೆ.ಎಸ್.ಎಸ್. ವಿದ್ಯಾಪೀಠ ಏರ್ಪಡಿಸಿದ್ದ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳವರ ಕೃತಿಗಳನ್ನು ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿಯವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು, ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು, ರಾಜ್ಯಪಾಲರಾದ ಶ್ರೀ ಥಾವರಚಂದ್ ಗೆಹ್ಲೋಟ್, ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿ, ಕೇಂದ್ರ ಸಚಿವರಾದ ಶ್ರೀ ಪ್ರಹ್ಲಾದ್ ಜೋಶಿ ಹಾಗೂ ಸಂಸದರಾದ ಶ್ರೀ ಪ್ರತಾಪ್ ಸಿಂಹ ಅವರು ಉಪಸ್ಥಿತರಿದ್ದರು.



ಮೇ ೨೫ ರಂದು ತುಮಕೂರು ತಾ. ಹರಳೂರು ಗ್ರಾಮದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೫ನೇ ಜನ್ಮದಿನೋತ್ಸವ ಹಾಗೂ ಶ್ರೀ ವೀರಭದ್ರಸ್ವಾಮಿ ದೇವಾಲಯದ ನಿತ್ಯದಾಸೋಹ ಭವನವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಚನ್ನಬಸವಸ್ವಾಮಿಗಳು, ಗೃಹಸಚಿವ ಶ್ರೀ ಆರಗ ಜ್ಞಾನೇಂದ್ರ, ಮಾಜಿ ಶಾಸಕ ಶ್ರೀ ಬಿ. ಸುರೇಶ್‌ಗೌಡ ಮೊದಲಾದವರು ಉಪಸ್ಥಿತರಿದ್ದರು.



ಜೂನ್ ೫ ರಂದು ಕೆಂಗೇರಿ ಉಪನಗರದಲ್ಲಿರುವ ಬಿಲ್ವಪತ್ರೆ ಬಂಡೇಮಠದಲ್ಲಿ ಏರ್ಪಡಿಸಿದ್ದ ಬಂಡೇಮಠದ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಚ್ಚಿದಾನಂದ ಮಹಾಸ್ವಾಮಿಗಳವರ ಪಟ್ಟಾಧಿಕಾರದ ಸುವರ್ಣ ಮಹೋತ್ಸವ ಸಮಾರಂಭವನ್ನು ಪರಮಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹಾಗೂ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಹರಗುರು ಚರಮೂರ್ತಿಗಳು, ಗಣ್ಯರು ಉಪಸ್ಥಿತರಿದ್ದರು.

ಅಂತರಂಗ

॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೮ ಜುಲೈ ೨೦೨೨ ಸಂಚಿಕೆ : ೦೭

ಒಳಪುಟಗಳಲ್ಲಿ .................


೨ ಸಂಪಾದಕೀಯ
೩ ಶ್ರೀವಾಣಿ
೪ ಸಿದ್ಧಲಿಂಗೇಶ್ವರ ವಚನ – ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ
೫ ಕಾಯಕಯೋಗಿ, ದಾಸೋಹಮೂರ್ತಿ ಲಿಂ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು – ನಾಡೋಜ ಡಾ. ಗೊ.ರು. ಚನ್ನಬಸಪ್ಪ
೧೧ ಅಭಿನವ ಬಸವ (ಕವನ) – ಎಂ.ವಿ. ನೆಗಳೂರ
೧೨ ನಾನೂ ಸಂಸ್ಕೃತವನ್ನು ಓದಿದೆ – ಕೋ.ರಂ. ಬಸವರಾಜು
೧೪ ಅರಿದೆಡೆ ಶರಣ ಮರೆದಡೆ ಮಾನವ – ಪ್ರೊ. ಬಿ.ಆರ್. ಪೋಲಿಸ್ ಪಾಟೀಲ
೧೮ ಕ್ಷೇತ್ರವಾರ್ತೆ : ಶ್ರೀಮಠದಲ್ಲಿ ೨೦೨೨-೨೩ ದಾಖಲಾತಿ ಮಾಡಲು ಮಕ್ಕಳೊಂದಿಗೆ ಬಂದ ಪೋಷಕರ ದಂಡು – ದೃಶ್ಯಾವಳಿಗಳು
೧೯ ಆಸ್ಥಾನ ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯ –ಎಚ್.ಎಸ್. ಸಿದ್ಧಗಂಗಪ್ಪ
೨೩ ಸಂಸ್ಕೃತ ವಿದ್ವಾಂಸ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶರವರಿಗೆ ಎಪ್ಪತ್ತರ ಅಭಿನಂದನೆ
೨೫ ಶ್ರದ್ಧಾಂಜಲಿ : ಪ್ರೊ. ಡಿ. ಚಂದ್ರಪ್ಪನವರು ವಿಧಿವಶ
೨೭ ಸಿದ್ಧಗಂಗಾ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ – ಕಾರ್ಯಕ್ರಮಗಳ ವರದಿ
೩೦ ಕೆಂಗೇರಿ ಬಿಲ್ವಪತ್ರೆ ಬಂಡೇಮಠದ ಪರಮಪೂಜ್ಯ ಶ್ರೀ ಶ್ರೀ ಸಚ್ಚಿದಾನಂದ ಮಹಾಸ್ವಾಮಿಗಳವರ ಪೀಠಾಧಿಕಾರದ ಸುವರ್ಣ ಮಹೋತ್ಸವ ಸಂಭ್ರಮ
೩೨ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳು



| ಚಂದಾ ವಿವರ | ಆಜೀವ ಸದಸ್ಯತ್ವ ರೂ. 1500/-<br>ವಾರ್ಷಿಕ ಚಂದಾ ರೂ. 250.00 ಬಿಡಿ ಪ್ರತಿ ರೂ. 20.00 |
|---|---|

ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು

ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು :
ಕೆ.ಬಿ. ಶಿವಶಂಕರಯ್ಯ

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ವಿ. ಸೋಮಶೇಖರಯ್ಯ
ಎನ್.ವಿ. ಸತೀಶ್‌ಕುಮಾರ್

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು-೫೬೦ ೦೧೦



ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೫೨೨.
ಮೊ : ೯೧೪೧೧೦ ೫೬೫೪೫

email: siddaganganews@gmail.com





# ಪ್ರಧಾನ ಸಂಪಾದಕರ ನುಡಿ........

ಪರಿಸರ ಮಾಲಿನ್ಯಕ್ಕಿಂತ ಭೀಕರವಾದ; ಅಪಾಯಕಾರಿಯಾದ ಮಾಲಿನ್ಯವೆಂದರೆ ಮನಸ್ಸಿನ ಮಾಲಿನ್ಯ. ಮನಸ್ಸು ಮಾಡಿದರೆ ಕಾಳಜಿ, ಕಳಕಳಿ ಇದ್ದರೆ, ವೈಯಕ್ತಿಕ ಹಾಗೂ ಸಾಮೂಹಿಕ ಭಾಗಿತ್ವದಿಂದ ಪರಿಸರ ಮಾಲಿನ್ಯವನ್ನು ಕೊಂಚ ಮಟ್ಟಿಗಾದರೂ ಪರಿಹರಿಸಲು ಮುಕ್ತವಾದ ಅನೇಕ ಮಾರ್ಗಗಳಿವೆ. ಆದರೆ ಮನಸ್ಸಿನ ಮಾಲಿನ್ಯಗಳಾದ ದ್ವೇಷ, ಮತ್ಸರ, ಅಸೂಯೆ, ಕುಟಿಲೋಪಾಯ, ಮೋಸ, ವಂಚನೆ ಮೊದಲಾದ ಮಾಲಿನ್ಯದಿಂದ ಸಮಾಜದ ಮೇಲೆ ದುಷ್ಪರಿಣಾಮ ಬೀರುತ್ತದೆ. ಅವು ತನ್ನನ್ನು ಸುಡುವುದಲ್ಲದೆ ಸುತ್ತಮುತ್ತಲಿನವರನ್ನು ಸುಡುತ್ತದೆ.

ಬಸವಣ್ಣನವರು ಹೇಳಿರುವಂತೆ ಒಬ್ಬ ವ್ಯಕ್ತಿ ಸಮಾಜಕ್ಕೆ ಭೂಷಣನಾಗಬೇಕಾದರೆ ಅಂತರಂಗ ಮತ್ತು ಬಹಿರಂಗಗಳೆರಡರಲ್ಲೂ ಸಾಮ್ಯತೆ ಹೊಂದಿರಬೇಕು. ಅವು ಒಂದಕ್ಕೊಂದು ಪೂರಕವಾಗಿರಬೇಕು. ಅಂತರಂಗ ಶುದ್ಧಿಯಾಗದ ಹೊರತು, ಬಹಿರಂಗಕ್ಕೆ ಬೆಲೆ ಬರುವುದಿಲ್ಲ, ಅಂತರಂಗದ ಶುದ್ಧಿಯನ್ನು ಕಾಪಾಡಿಕೊಳ್ಳಬೇಕಾದರೆ ಸಚ್ಚಾರಿತ್ರ್ಯವಿರಬೇಕು, ಸಂಸ್ಕಾರವಿರಬೇಕು. ಅದನ್ನು ರೂಢಿಸಿಕೊಳ್ಳಬೇಕಾದರೆ ಬಸವಾದಿ ಶರಣರ ವಚನಗಳನ್ನು ಅಧ್ಯಯನ ಮಾಡಿ ಅದರಲ್ಲಿ ಅಡಕವಾಗಿರುವ ಆದರ್ಶ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಮನಸ್ಸು ಆದರ್ಶಗಳ ಗಣಿಯಾಗಬೇಕು. ಪರಿಶುದ್ಧವಾದ ಗಂಗಾಜಲವಾಗಬೇಕು. ಮಲಿನವಿಲ್ಲದ ಮಾನಸ ಸರೋವರವಾಗಬೇಕು, ಶುಭ್ರವಾದ ದರ್ಪಣವಾಗಿರುವಂತೆ ನೋಡಿಕೊಳ್ಳಬೇಕು.

ವೇದಿಕೆಯ ಮೇಲೆ ಗಂಟೆಗಟ್ಟಲೆ ಬಸವಾದಿ ಶರಣರ, ದಾರ್ಶನಿಕರ ಮಾತುಗಳನ್ನು ಉಲ್ಲೇಖಿಸುತ್ತಾ, ಪ್ರೇಕ್ಷಕರು ತಲೆ ತೂಗುವಂತೆ ಮಾತನಾಡುವವರು ಆತ್ಮವಿಮರ್ಶೆ ಮಾಡಿಕೊಳ್ಳಬೇಕಾಗಿದೆ. ಮನಸ್ಸಿನಲ್ಲಿ ಅನೈತಿಕತೆಯ ರಾಡಿಯನ್ನು ತುಂಬಿಕೊಂಡು ಹೊರಗೆ ಸಭ್ಯರಂತೆ ಮಾತನಾಡುವ ಮುನ್ನ ತಾನು ಈ ಮಾತುಗಳನ್ನಾಡಲು ಅರ್ಹನೆ ಎಂಬುದನ್ನು ಆತ್ಮಸಾಕ್ಷಿಗನುಗುಣವಾಗಿ ಸ್ವತಃ ತಾವೇ ಪ್ರಶ್ನೆಯನ್ನು ಹಾಕಿಕೊಳ್ಳಬೇಕು. ಜನ ಮೆಚ್ಚಿಸುವುದಕ್ಕಿಂತ ಜನಾರ್ಧನ ಮೆಚ್ಚುವಂತೆ ನಡೆದುಕೊಳ್ಳಬೇಕು. ಇವತ್ತು ಆತ್ಮಸಾಕ್ಷಿ ಎಂಬ ಪದಪ್ರಯೋಗವೇ ಶಿಥಿಲವಾಗುತ್ತಿದೆ. ಅಂತವರನ್ನು ಕಂಡು ಆತ್ಮಸಾಕ್ಷಿಯೇ ನಾಚಿಕೆಪಡುವಂತಾಗಿದೆ.

ಬಾಹ್ಯ ಸೌಂದರ್ಯಕ್ಕಿಂತ ಅಂತರಂಗದ ಸೌಂದರ್ಯಕ್ಕೆ ಮಹತ್ವಕೊಟ್ಟಾಗ ಸಮಾಜ ಅಂತಹ ವ್ಯಕ್ತಿಯನ್ನು ಗೌರವಿಸುತ್ತದೆ. ಅಂತಹ ಸಂಸ್ಕಾರವಂತ ಬದುಕನ್ನು ರೂಪಿಸಿಕೊಳ್ಳಬೇಕು. ಇಂತವರನ್ನು ಕಂಡು ಕೂಡಲಸಂಗಮ ದೇವರು ಮೆಚ್ಚುತ್ತಾನೆ ಎಂಬುದು ಬಸವಣ್ಣನವರ ಆಶಯದ ನುಡಿಗಳು.

ಬಸವಣ್ಣನವರು ಹೇಳಿದ ಅಂತರಂಗ-ಬಹಿರಂಗಶುದ್ಧಿ, ನಡೆ-ನುಡಿಗೂ ಸಾಮ್ಯವಿದೆ. ನಾವು ಅನೇಕ ಸಂದರ್ಭಗಳಲ್ಲಿ ಮಾತನಾಡುವಾಗ ನಡೆ-ನುಡಿ ಚೆನ್ನಾಗಿರಬೇಕು ಎಂದು ಹೇಳುವುದು ಸಾಮಾನ್ಯವಾಗಿದೆ. ನಾವು ನಮ್ಮಲ್ಲಿ ನಡೆ-ನುಡಿಯಲ್ಲಿ ಏಕತಾನತೆಯನ್ನು ಕಾಪಾಡಿಕೊಳ್ಳದೆ ಬೇರೊಬ್ಬರ ನಡೆ-ನುಡಿಯ ಬಗ್ಗೆ ಮಾತನಾಡುವುದು ಅಭ್ಯಾಸವಾಗಿದೆ. ಅದು ವಿಪರ್ಯಾಸವೂ ಹೌದು. "ಕ್ರಿಯೆ ನಡೆಯ ಸಂಕೇತವಾದರೆ, ಜ್ಞಾನ ನುಡಿಯ ಸಂಕೇತವಾಗುತ್ತದೆ. ಅಂದರೆ ಅರಿವು-ಆಚರಣೆಗಳ ಸಮನ್ವಯ ಸಂಬಂಧವೇ ಶರಣರ ಪರಿಕಲ್ಪನೆಯ 'ನಡೆ-ನುಡಿ.' ಒಂದು ರೀತಿಯಲ್ಲಿ ಶರಣರು ನುಡಿಗಿಂತ ನಡೆಗೇ ಹೆಚ್ಚು ಮಹತ್ವ ಕೊಟ್ಟಿದ್ದಾರೆ. ಏಕೆಂದರೆ ಒಳ್ಳೆಯ ನುಡಿ ಹೂವು ಅರಳುವುದು ಒಳ್ಳೆಯ ನಡೆ ಬಳ್ಳಿಯಲ್ಲಿ ಮಾತ್ರ "ನಡೆಯ ಬಲ್ಲಡೆ ನುಡಿ ಅಡಗಬೇಕು" ಎನ್ನುವ ಎತ್ತರ ಶರಣರದು.

"ನಡೆ-ನುಡಿಗಳು ಪರಿಶುದ್ಧವಾಗಿರಬೇಕು. ಪ್ರಾಮಾಣೀಕವಾಗಿರಬೇಕು. ಈ ಪರಿಶುದ್ಧತೆ ಮತ್ತು ಪ್ರಾಮಾಣಿಕತೆಗಳಿಗೆ ಅಗತ್ಯವಾದುದು ವ್ಯಕ್ತಿಯ ಜೀವನ ಶ್ರದ್ಧೆ. ಅದು ಮೂಲಭೂತ ಅಗತ್ಯ. ಇಲ್ಲವಾದರೆ ಎಲ್ಲ ವ್ಯರ್ಥವಾಗುತ್ತದೆ. ಟೊಳ್ಳಾದ ಬೀಜ ಬಿತ್ತಿ ನೀರೆರೆದರೆ ಅದು ಚಿಗುರುವುದಿಲ್ಲ. ಕಲ್ಲು ಬಿತ್ತಿ ನೀರೆರೆದರೆ ಪಲ್ಲವಿಸಲಾರದು. ಆದ್ದರಿಂದ ಕೃತಕ ಜೀವನ ಸಾರ್ಥಕ ಗುರಿಯತ್ತ ನಮ್ಮನ್ನೊಯ್ಯುವುದಿಲ್ಲ ಎಂಬ ಹಿರಿಯ ಜಾನಪದ ವಿದ್ವಾಂಸರಾದ ನಾಡೋಜ ಡಾ. ಗೊ.ರು. ಚನ್ನಬಸಪ್ಪನವರ ಮಾತು ಚಿಂತನಾರ್ಹವಾದವು.

ಪ್ರೊ. ಹೆಚ್.ವಿ. ವೀರಭದ್ರಯ್ಯ





# ಶ್ರೀವಾಣಿ



## ಅಂತರಂಗದೊಳಗೆ ಅಡಗಿಸಿಟ್ಟ ದಿವ್ಯರತ್ನವನು

ಒಮ್ಮೆ ಶಿವ ಎಲ್ಲಾ ದೇವತೆಗಳ ಸಭೆ ಕರೆದ. ಸಭೆಯ ಉದ್ದೇಶವನ್ನು ಕುರಿತು 'ನೋಡಿ ದೇವತೆಗಳಿರಾ! ನನ್ನ ಹತ್ತಿರ ಬೆಲೆಕಟ್ಟಲಾಗದ ಮತ್ತು ಅದ್ಭುತವಾದ ಒಂದು ದಿವ್ಯರತ್ನವಿದೆ. ಅದನ್ನು ಮಾನವರು ಕದಿಯಬಾರದು, ಅಂಥ ಜಾಗದಲ್ಲಿ ಅಡಗಿಸಬೇಕು, ಅಂತಹ ಜಾಗ ಯಾವುದು? ಹೇಳಿರಿ' ಎಂದು ಹೇಳಿದ. ಆಗ ಒಬ್ಬ ದೇವತೆ 'ಅದನ್ನು ಭೂಮಿಯ ಒಳಗೆ ನಿಕ್ಷೇಪಿಸಬಹುದು. ಅದು ಯಾರ ಕಣ್ಣಿಗೂ ಬೀಳುವುದಿಲ್ಲ' ಎಂದ. ಆಗ ಇನ್ನೊಬ್ಬ 'ಮನುಷ್ಯ ಬಹಳ ಬುದ್ಧಿವಂತನಿದ್ದಾನೆ. ಭೂಮಿಯನ್ನೇ ಕೊರೆಯುತ್ತಾನೆ, ಗಣಿ ತೋಡುತ್ತಾನೆ. ಹಾಗಾಗಿ ಅದು ಸುರಕ್ಷಿತವಾದ ಸ್ಥಳವಲ್ಲ. ಆದ್ದರಿಂದ ಅದನ್ನು ಬಿಟ್ಟು ಸಮುದ್ರದ ತಳದಲ್ಲಿ ಅಡಗಿಸುವುದು ಕ್ಷೇಮ' ಎಂದ. ಹೀಗೆ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಹೇಳಿದರು.

ಆಗ ಅದರಲ್ಲೊಬ್ಬ ಬುದ್ಧಿವಂತ 'ಕೇಳಿರಿ! ಮಾನವ ಬಹಳ ಮುಂದುವರಿದಿದ್ದಾನೆ. ನೀರಿನೊಳಗೂ ದೋಣಿ ತೆಗೆದುಕೊಂಡು ಹೋಗಿ ಶೋಧಿಸುವುದನ್ನು ಕಲಿತಿದ್ದಾನೆ. ಹಾಗಾಗಿ ಅದೂ ಸುರಕ್ಷಿತವಾದ ಜಾಗವಲ್ಲ. ಆದರೆ ಅವನು ಹುಡುಕದೇ ಇರುವ ಜಾಗವುಂಟು, ಅದೇ ಅವನ ಅಂತರಂಗ. ಅಲ್ಲಿ ಆ ದಿವ್ಯರತ್ನವನ್ನಿಟ್ಟರೆ ಅದನ್ನು ಅವನು ಕದಿಯಲಾರ. ಹಾಗೂ ಅದನ್ನು ಕದಿಯಲೇಬೇಕೆಂದರೆ ನಿನ್ನ ಸಹಾಯವೇ ಬೇಕು. ಅಂದರೆ ನಿನ್ನ ಪ್ರತಿರೂಪನಾದ ಗುರುವಿನ ಮಾರ್ಗದರ್ಶನ ಬೇಕು' ಎಂದು ಹೇಳುವನು.

**05-07-1989**

ಪ್ರಾಮಾಣಿಕ ವ್ಯಕ್ತಿಗಳು ದುಷ್ಟಶಕ್ತಿಗೆ ಬಲಿಯಾಗುತ್ತಿರುವ ಸಂದರ್ಭವೇ ಹೆಚ್ಚು. ಪ್ರಾಮಾಣಿಕರು ಅಧಿಕಾರಿಗಳ, ಶ್ರೀಮಂತರ, ಪುಂಡರ, ಅನೀತಿವಂತರ ಕೈಗೆ ಸಿಕ್ಕಿ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಇಲ್ಲವೆ ನರಳಿ ನರಳಿ ಮಾನಸಿಕ ಚಿಂತೆಯಿಂದ ಸಾಯುತ್ತಿದ್ದಾರೆ. ಪ್ರಾಮಾಣಿಕರ ಬಲಿ ಹೆಚ್ಚಿದಂತೆ ಅನ್ಯಾಯ ತಾಂಡವವಾಡುತ್ತದೆ. ದೇಶದ ಪ್ರಗತಿ ಕುಂಠಿತವಾಗುತ್ತದೆ.

* * *

'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ' ಅಂತ ಒಂದು ಶ್ರೇಷ್ಠವಾಕ್ಯ. ಹೆತ್ತ ತಾಯಿ, ಹೆತ್ತ ಭೂಮಿ ಎರಡೂ ಸ್ವರ್ಗಕ್ಕಿಂತಲೂ ಶ್ರೇಷ್ಠ ಅಂತ. ಇವುಗಳನ್ನು ರಕ್ಷಣೆ ಮಾಡುವಂತಹ ಜವಾಬ್ದಾರಿ ಎಲ್ಲರ ಮೇಲೂ ಉಂಟು. ಹೆತ್ತಿರುವಂತಹ ತಾಯಿ; ಹುಟ್ಟಿರುವಂತಹ ಭೂಮಿ ಎರಡೂ ಅಮೂಲ್ಯ ರತ್ನಗಳು. ಅವುಗಳನ್ನು ರಕ್ಷಣೆ ಮಾಡುವಂತದ್ದು ಎಲ್ಲರ ಜವಾಬ್ದಾರಿ.

* * *

ನಿಜವಾದ ವಿದ್ಯೆಗಳಿಸಬೇಕಾದರೆ ಕಷ್ಟಪಟ್ಟು ಅಧ್ಯಯನ ಮಾಡಬೇಕು. ವಿದ್ಯಾಭ್ಯಾಸದ ಜೀವನ ಕಷ್ಟ ಎಂಬ ಕಲ್ಪನೆ ಉಂಟಾಗಬೇಕು. ವಿದ್ಯಾರ್ಥಿಯಾಗಿಯೇ ಜೀವನ ಸಾಗಿಸುವುದು ಒಂದು ಪರಿವರ್ತನೆ ಆಗಬೇಕು. ಸಾಧಕ ವಿದ್ಯೆ, ಬಾಧಕ ದ್ರವ್ಯ ಎಂಬ ಸೂಕ್ತಿಯಂತೆ ಸಾಧನೆ ಮಾಡಿಯೇ ವಿದ್ಯೆ ಕಲಿಯಬೇಕು. ಇದು ಎಲ್ಲಕ್ಕೂ ಅನ್ವಯವಾಗುವಂತಹ ಮಾತು.

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



**ಹೆಣ್ಣು ಪ್ರಾಣವೆ, ಪ್ರಾಣವಾಗಿಪ್ಪರಯ್ಯಾ**
**ಮಣ್ಣು ಪ್ರಾಣವೇ, ಪ್ರಾಣವಾಗಿಪ್ಪರಯ್ಯಾ**
**ಹೊನ್ನು ಪ್ರಾಣವೇ, ಪ್ರಾಣವಾಗಿಪ್ಪರಯ್ಯಾ**
**ಈ ಹೆಣ್ಣು ಹೊನ್ನು ಮಣ್ಣೆಂಬವು ಪ್ರಾಣಂಗೆ**
**ಪ್ರಪಂಚು ಭಾವವೆಂದರಿದು**
**ಪ್ರಾಣಂಗೆ ಲಿಂಗಕಳೆಯ ಸಂಬಂಧಿಸಿ,**
**ಲಿಂಗಕ್ಕೆ ಪ್ರಾಣಕಳೆಯ ಸಂಬಂಧಿಸಿ,**
**ಪ್ರಾಣವೇ ಲಿಂಗವೆಂಬ ಪ್ರತಿಭಾವ ತೋರದೇ,**
**ಅಪ್ರತಿಮ ಲಿಂಗ ಸಂಬಂಧಿಯಾಗಿರ್ದನು ಕಾಣಾ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ಹೆಣ್ಣು ಪ್ರಾಣವೆ-ಚೈತನ್ಯವೆ, ಪ್ರಾಣವಾಗಿಪ್ಪರಯ್ಯಾ-ಅದನ್ನೆ ಚೈತನ್ಯವ ಮಾಡಿಕೊಂಡಿರುವರಯ್ಯಾ; ಮಣ್ಣು ಪ್ರಾಣವೆ-ಚೈತನ್ಯವೆ, ಪ್ರಾಣವಾಗಿಪ್ಪಿರಯ್ಯಾ – ಅದನ್ನೇ ಚೈತನ್ಯವ ಮಾಡಿಕೊಂಡಿಪ್ಪಿರಯ್ಯಾ ; ಹೊನ್ನು ಪ್ರಾಣವೆ ಚೈತನ್ಯವೆ, ಪ್ರಾಣವಾಗಿಪ್ಪಿರಯ್ಯಾ- ಅದನ್ನೆ ಚೈತನ್ಯವ ಮಾಡಿಕೊಂಡಿಪ್ಪಿರಯ್ಯಾ; ಈ ಹೊನ್ನು ಹೆಣ್ಣು ಮಣ್ಣೆಂಬವು-ಈ ಈ ಹೊನ್ನು ಹೆಣ್ಣು ಮಣ್ಣು ಮಣ್ಣೆಂಬ ತ್ರಿವಿಧಮಲಂಗಳು, ಪ್ರಾಣಂಗೆ-ಪ್ರಾಣನಿಗೆ, ಪ್ರಪಂಚು ಭಾವವೆಂದು-ಪ್ರಕೃತಿಭಾವವೆಂದು, ಅರಿದು-ತಿಳಿದು, ಪ್ರಾಣಂಗೆ-ಜೀವನಿಗೆ, ಲಿಂಗಕಳೆಯ-ಲಿಂಗದ ಚಿತ್ಕಳೆಯನು, ಸಂಬಂಧಿಸಿ-ಸ್ವಾಯತವ ಮಾಡಿ, ಲಿಂಗಕ್ಕೆ ಪ್ರಾಣಕಳೆಯ-ಲಿಂಗಕ್ಕೆ ಪ್ರಾಣದ ಚಿತ್ಕಳೆಯನು, ಸಂಬಂಧಿಸಿ-ಸ್ವಾಯತವ ಮಾಡಿ, ಪ್ರಾಣಲಿಂಗವೆಂಬ ಪ್ರತಿಭಾವ-ಪ್ರಾಣ ಬೇರೆ ಲಿಂಗ ಬೇರೆ ಎಂಬ ಭಿನ್ನಭಾವವು, ತೋರದೆ-ಕಾಣಿಸದೆ, ಅಪ್ರತಿಮ-ಪ್ರತಿರಹಿತವಾದ, ಲಿಂಗ-ಮಹಾಲಿಂಗದಲ್ಲಿ, ಸಂಬಂಧಿಯಾಗಿರ್ದನು-ಸ್ವಾಯತ ಉಳ್ಳವನಾಗಿರುವನು ಕಾಣಾ-ಕಂಡಾ, ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಅಂತರಂಗದ ಕುದಿಗೆ ಒಳಗಾಗದ ಬದುಕು
ಚಿಂತೆ ಚಿತೆಯೊಳಗೆ ಬೆಂದಪುದು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವಣ್ಣನ ನೆನೆದರೆ ಹಸನಾಗುವುವೀ ಬದುಕು
ಬಸವಣ್ಣನೇ ದೈವ ಮನುಕುಲಕೆ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀರಮೇಲೆ ತಾನೆಣ್ಣೆ ತೇಲುವ ವೋಲು
ಯಾರೊಂದಿಗಾದರೂ ನೀಬಾಳು । ಹರಸೀವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗಕ್ಕರ್ಪಿಸದೆ ಸಲಿಸದಿರು ಏನನ್ನು
ಅಂಗದಿಚ್ಛೆಗೆ ಬಾಯಿ ಬಿಡಬೇಡ । ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎಣ್ಣೆ ಬತ್ತಿ ಕೂಡಿ ಜ್ಯೋತಿ ಉರಿವಂದದಲಿ
ಅರಿವು ಆಚಾರಗಳು ಬೆಸದಿರಲಿ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನಕ್ರಿಯಾರೂಪ ಸಾಕಾರವಾಗಿರುವೆ
ಮಾನನಿಧಿ ಮಂಗಲ ಶ್ರೀಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸೇವೆಯೆ ಶಿವಯೋಗ ಕಾಯಕವೆ ಶಿವಪೂಜೆ
ಮಾನವೀಯತೆಯೆ ಶಿವಧರ್ಮ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗವಂತನಾಗಿ ಅಂಗಸಂಗವಮಾಡಿ
ಕಂಗಳಿಚ್ಛೆಗೆ ಎಳಸದಿರು । ನೀವೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತನುವ ಸಂತೈಸಿಕೋ ಮನವಸಂತೈಸಿಕೋ
ತನುಮನವ ಬಸವನಲಿ ಸಂತೈಸು । ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇಹ-ಪರವೆಂಬವು ಅವಳಿ ಜವಳಿ ರತ್ನ
ಇಹವು ಪರಕೆ ಹಿಡಿದ ಕೈದೀಪ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪ್ರೊ. ಹೆಚ್.ವಿ. ವೀರಭದ್ರಯ್ಯ



ನುಡಿನಮನ

# ಕಾಯಕಯೋಗಿ, ದಾಸೋಹಮೂರ್ತಿ, ಲಿಂ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು

– ನಾಡೋಜ ಡಾ. ಗೊ.ರು. ಚನ್ನಬಸಪ್ಪ *

ಮೂರು ವಾರಗಳ ಹಿಂದಷ್ಟೆ ನಾವೆಲ್ಲ ಬಸವ ಜಯಂತಿ ಆಚರಿಸಿದ್ದೇವೆ. ಈ ಹಿನ್ನೆಲೆಯಲ್ಲಿ ನನ್ನ ಒಂದು ಕಲ್ಪಿತ ಪ್ರಸಂಗದ ಉಲ್ಲೇಖದೊಂದಿಗೆ ನನ್ನ ಗುರುವಂದನ ನುಡಿಗಳನ್ನು ಆರಂಭಿಸುತ್ತಿದ್ದೇನೆ.

ಭೂಲೋಕವನ್ನು ಬಿಟ್ಟು ಹೋದ ಶರಣರೆಲ್ಲ ಶಿವಲೋಕದಲ್ಲಿ ನೆಮ್ಮದಿಯಾಗಿದ್ದರು. ಶಿವಲೋಕವೆಂದರೆ ಕೇಳಬೇಕೆ? ಅಲ್ಲಿ ಹಸಿವು-ನೀರಡಿಕೆಗಳಿಲ್ಲ. ಕತ್ತಲೆಯೇ ಇಲ್ಲ. ಅಲ್ಲಿ ಸೂರ್ಯ ತಂಪು; ಚಂದ್ರ ಬೆಚ್ಚಗೆ. ಅಂತಹ ಸುಖದ ಲೋಕ. ಅಲ್ಲಿ ಕೆಲಸವೇ ಇಲ್ಲವಾದುದರಿಂದ ವಿಶ್ರಾಂತಿಯ ಅಗತ್ಯವೂ ಇಲ್ಲ.

ಶಿವಶರಣರಲ್ಲಿ ತುಂಬ 'ಸೀನಿಯರ್' ಎನಿಸಿದ ಜೇಡರ ದಾಸಿಮಯ್ಯ ಒಂದು ದಿನ ಶಿವನ ಬಳಿಗೆ ಹೋಗಿ, 'ಶಿವನೆ, ನಿನ್ನ ಲೋಕದಲ್ಲಿ ಯಾವುದೇ ಕೊರತೆಯಿಲ್ಲ. ಭೂಲೋಕದಿಂದ ಬಂದಿರುವ ಶರಣರೆಲ್ಲ ಸುಖವಾಗಿದ್ದಾರೆ. ಆದರೆ, ಏಕೋ ಏನೋ, ಒಮ್ಮೆ ಭೂಲೋಕಕ್ಕೆ ಹೋಗಿ ಬಸವಣ್ಣನವರಿದ್ದ ಕಲ್ಯಾಣವನ್ನು ನೋಡಿ ಬರಬೇಕೆನಿಸಿದೆ. ನೀನೂ ಬರುವೆಯಾ? ಎಂದು ಕೇಳಿದ. ಅದಕ್ಕೆ ಶಿವ 'ಅಯ್ಯೋ ಮಹರಾಯ, ನನಗೆ ನಿನಗಿಂತ ಹೆಚ್ಚು ವಯಸ್ಸಾಗಿದೆ. ಈ ವಯಸ್ಸಿನಲ್ಲಿ ಎಂತಹ ಪ್ರವಾಸ? ಅಷ್ಟಕ್ಕೂ ಈಚೆಗೆ ಭೂಲೋಕದಿಂದ ನನ್ನ ಲೋಕಕ್ಕೆ ಬರುವಂತಹ ಜನರ ಸಂಖ್ಯೆಯೇ ಕಡಮೆಯಾಗಿದೆ. ಎಲ್ಲರೂ ಯಮನ ಲೋಕದ ಕಡೆಗೇ ನುಗ್ಗುತ್ತಿದ್ದಾರೆ. ಈಗಾಗಲೇ ಬಂದಿರುವ ನೀವೂ ಭೂಲೋಕಕ್ಕೆ ಹೋಗಿ ಅಲ್ಲೇ ಇದ್ದುಬಿಟ್ಟರೆ, ನನಗೆ ಎಷ್ಟು ಬೇಸರವಾಗಬಹುದು? ಆದರೂ, ನೀನು ಆಸೆ ಪಟ್ಟಿರುವುದರಿಂದ ಹೋಗಿಬರಬಹುದು. ಆದರೆ, ಎರಡು ದಿನ ಮಾತ್ರ ಅವಕಾಶ. ಅಷ್ಟರೊಳಗೆ ಹಿಂತಿರುಗಬೇಕು". ಎಂದು ಹೇಳಿ, "ನೀನು ಒಬ್ಬನೇ ಹೋಗುವುದಕ್ಕಿಂತ ಜೊತೆಯಲ್ಲಿ ಯಾರನ್ನಾದರೂ ಕರೆದುಕೊಂಡು ಹೋಗುವುದು ಒಳ್ಳೆಯದು" ಎಂದು, ಅಲ್ಲೇ ಇದ್ದ ಬಸವಣ್ಣನ ಕಡೆ ನೋಡಿ, 'ನೀನೂ ಹೋಗಿ ಬಾ ಬಸವಣ್ಣ' ಎಂದ. 'ಹಾಗೆಯೇ, ಈಗ ಅಲ್ಲಿರುವ ಜನರಿಗೆ ನೀನು ಮತ್ತೇನಾದರೂ ಸಂದೇಶ ಕೊಡುವುದಿದ್ದರೆ ಕೊಟ್ಟು ಬರಬಹುದು' ಎಂದ. ಆಗ ಬಸವಣ್ಣ, 'ಅಯ್ಯೋ ಶಿವನೆ, ಒಂದು ಸಲ ಅಲ್ಲಿದ್ದು ಬಂದದ್ದೇ ಸಾಕಾಗಿದೆ. ಮತ್ತೆ ಅಲ್ಲಿಗೆ ಹೋಗಲಾರೆ' ಎಂದ. ಉಳಿದ ಶರಣರೂ ಬಸವಣ್ಣ ಕೊಟ್ಟ ಉತ್ತರವನ್ನೇ ಕೊಟ್ಟರು.

ಆಗ ಶಿವ ಬಸವಣ್ಣನಿಗೇ ಒತ್ತಾಯ ಮಾಡಿ, "ಇಲ್ಲ ಬಸವಣ್ಣ, ಜೇಡರ ದಾಸಿಮಯ್ಯನ ಆಸೆಯನ್ನು ನೀನೇ ಈಡೇರಿಸಬೇಕು. ದಾಸಿಮಯ್ಯನಿಗೂ 'ಕಂಪನಿ' ಕೊಟ್ಟಂತಾಗುತ್ತದೆ. ಭೂಲೋಕದ ಇಂದಿನ ಜನರ ನಡೆ-ನುಡಿಗಳನ್ನು ನೀನೂ ಕಣ್ಣಾರೆ ಕಂಡಂತಾಗುತ್ತದೆ" ಎಂದು ಹೇಳಿದ. ಶಿವನ ಮಾತನ್ನು ಮೀರುವ ಭಕ್ತನಲ್ಲ ಬಸವಣ್ಣ. ಶಿವನ ಆಣತಿಯಂತೆ ದಾಸಿಮಯ್ಯನೊಂದಿಗೆ ಕಲ್ಯಾಣಕ್ಕೆ ಹೋಗಿಬರಲು ಒಪ್ಪಿಕೊಂಡ. ಆಗ ಅಲ್ಲೇ ಇದ್ದ ಮಡಿವಾಳ ಮಾಚಯ್ಯ, 'ಶಿವನೇ ಇವರಿಬ್ಬರ ಜೊತೆಯಲ್ಲಿ ನಾನೂ ಹೋಗಿ ಬರಲೇ' ಎಂದು ಕೇಳಿದ. ಶಿವ 'ಆಗಬಹುದು' ಎಂದ.

ಮೂವರೂ ಜೊತೆಗೂಡಿ ಕಲ್ಯಾಣದ ಜನನಿಬಿಡ ರಾಜಬೀದಿಯಲ್ಲಿ ಬಂದರು. ಯಾರೊಬ್ಬರೂ ಇವರನ್ನು ಗುರುತಿಸಲಿಲ್ಲ; ಗಮನಿಸಲಿಲ್ಲ. ಕಲ್ಯಾಣದ ಎಲ್ಲಾ ಬೀದಿಗಳಲ್ಲಿ ಅಡ್ಡಾಡಿದರೂ ಇವರನ್ನು ಯಾರೂ ಮಾತನಾಡಿಸಲಿಲ್ಲ. ಅವರಿದ್ದ ಕ್ಷೇತ್ರಗಳೆಲ್ಲ ಯಾರು ಯಾರದ್ದೋ ಪಾಲಾಗಿದ್ದವು. ಉಳಿದಿದ್ದ ಗವಿ-ಗುಂಡಾರಗಳೆಲ್ಲ ಹಾವು-ಚೇಳು, ಹುಳ-ಹುಪ್ಪಟೆಗಳ ಬೀಡಾಗಿದ್ದವು. ಬಸವಣ್ಣನಿದ್ದ 'ಮಹಾಮನೆ'ಯ ಸುಳುಹೂ ಕಾಣಲಿಲ್ಲ. ಆಗ ಜೇಡರ ದಾಸಿಮಯ್ಯ 'ಏನು

* ಗ್ರಾಮ ವಿಕಾಸ ಪ್ರತಿಷ್ಠಾನ, ನಂ. ೪೦೬, ಪ್ರಶಾಮ, 'ಎಫ್' ರಸ್ತೆ, ಐಡಿಯಲ್ ಹೋಮ್ಸ್ ಟೌನ್‌ಷಿಪ್, ರಾಜರಾಜೇಶ್ವರಿ ನಗರ, ಬೆಂಗಳೂರು-೫೬೦೦೯೮

ಬಸವಣ್ಣ ನೀನಿದ್ದ ಕಲ್ಯಾಣಕ್ಕೆ ಇಂತಹ ಸ್ಥಿತಿ ಬಂದಿದೆ. ನನ್ನನ್ನಿರಲಿ, ನಿನ್ನನ್ನಾದರೂ ಇಲ್ಲಿನ ಜನ ಗುರುತಿಸ ಬೇಡವೆ? ಇನ್ನು ನಾವು ಇಲ್ಲಿ ನೋಡುವುದೇನಿದೆ? ಹಿಂದಕ್ಕೆ ಹೋಗೋಣ' ಎಂದ. ಅದನ್ನು ಕೇಳಿದ ಮಡಿವಾಳ ಮಾಚಯ್ಯ "ಶಿವನ ಅಪ್ಪಣೆಯನ್ನು ಪಡೆದು ಇಷ್ಟು ದೂರ ಬಂದು ಇಲ್ಲಿ ನಡೆಯುತ್ತಿರುವ ಅನ್ಯಾಯ-ಅಕ್ರಮಗಳನ್ನು ಕಂಡೂ ನಾವು ಮೂಕರಂತೆ ಹಿಂತಿರುಗುವುದೆ?:" ಎಂದು ಕೋಪದಿಂದ ತನ್ನ ಖಡ್ಗಕ್ಕೆ ಕೈಹಾಕಿದ. ಆಗ ಬಸವಣ್ಣ ಕಣ್ಣಿನಿಂದಲೇ ಸನ್ನೆ ಮಾಡಿ ಮಾಚಯ್ಯನನ್ನು ಸುಮ್ಮನಾಗಿಸಿದ.

ಸರಿ ಮೂವರೂ ಶಿವಲೋಕಕ್ಕೆ ಹಿಂತಿರುಗಿದರು. ಅವರು ತುಂಬ ಬಳಲಿ ಹೋಗಿದ್ದರು. ಶಿವಲೋಕದ ದ್ವಾರಪಾಲಕರೂ ಅವರನ್ನು ಗುರುತಿಸಲಾಗದೆ ಒಳಗೆ ಬಿಡಲಿಲ್ಲ. ತಮ್ಮ ಗುರುತು ಹೇಳಿದರೂ ಒಪ್ಪದ ಆ ದ್ವಾರಪಾಲಕರು ಅವರನ್ನು ಶಿವನ ಬಳಿಗೆ ಕರೆದೊಯ್ದರು. ಅವರನ್ನು ನೋಡಿದ ಕೂಡಲೇ ಶಿವ "ಪಾಪ, ನೀವು ತುಂಬ ಆಯಾಸಗೊಂಡಿರುವಂತೆ ಕಾಣುತ್ತದೆ. ನಿಮ್ಮ ಕಲ್ಯಾಣ ಈಗ ಹೇಗಿದೆ?" ಎಂದು ಕೇಳಿದ. ಅದಕ್ಕೆ ಬಸವಣ್ಣ "ತಂದೆ, ಅದನ್ನು ನೀನು ಕೇಳದೆ ಇರುವುದೇ ಒಳಿತೆಂದು ಕಾಣುತ್ತದೆ. ನಾನು ಇಲ್ಲಿಗೆ ಬಂದು ೮೫೦ ವರ್ಷಗಳ ಮೇಲಾಯಿತು. ಇಷ್ಟರಲ್ಲಿ ಅಲ್ಲಿ ಎಲ್ಲ ಸುಧಾರಣೆ ಆಗಿರಬಹುದು ಎಂದು ನಾನು ತಿಳಿದಿದ್ದೆ. ಆದರೆ, ನಾನು ಅಲ್ಲಿದ್ದಾಗ ಯಾವ ಯಾವ ಅನಿಷ್ಟಗಳ ವಿರುದ್ಧ ಹೋರಾಟ ನಡೆಸಿದೆನೋ ಆ ಅನಿಷ್ಟಗಳು ಅಂದಿಗಿಂತ ಹೆಚ್ಚಾಗಿ ತಾಂಡವವಾಡುತ್ತಿವೆ. ನಾನು ಇನ್ನೂ ಮತ್ತೆಂದಿಗೂ ಅತ್ತ ಕಾಲಿಡಲಾರೆ. ಇಟ್ಟುದಾದರೆ ನಿಮ್ಮಾಣೆ. ನಿಮ್ಮ ಪ್ರಮಥರಾಣೆ" ಎಂದ. ಅಷ್ಟರಲ್ಲಿ ಮಡಿವಾಳ ಮಾಚಯ್ಯ "ಶಿವನೇ, ಬಸವಣ್ಣ ಹೇಳಿದ್ದೆಲ್ಲ ಸತ್ಯ. ಅಲ್ಲಿನ ದ್ರೋಹಿಗಳಿಗೆ ಬುದ್ಧಿಕಲಿಸಿ ಹೋಗೋಣವೆಂದು ನಾನೆಂದರೂ, ಬಸವಣ್ಣನವರು ಅವಕಾಶ ಕೊಡಲಿಲ್ಲ" ಎಂದ. ಆಗ ಶಿವನು ದಾಸಿಮಯ್ಯನ ಕಡೆ ತಿರುಗಿ ನೋಡಿದ. ದಾಸಿಮಯ್ಯ "ನಿಜ ತಂದೆ. ಬಸವಣ್ಣನವರು ಅಲ್ಲಿದ್ದಾಗ ಮಾನವ ಘನತೆ ಮತ್ತು ಸಮಾನತೆಗಾಗಿ ಮಾಡಿದ ಹೋರಾಟದ ಫಲವನ್ನೆಲ್ಲ ಈಗಿನ ಜನ ಹಾಳು ಮಾಡಿದ್ದಾರೆ. ಜಾತಿ-ಮತ-ಪಂಗಡಗಳು ಒಂದಕ್ಕೆ ಹತ್ತಾಗಿ ಬೆಳೆದು ಕಲ್ಯಾಣವಷ್ಟೇ ಅಲ್ಲ, ಇಡೀ ಭೂಲೋಕವನ್ನೇ ಕಿತ್ತು ತಿನ್ನುತ್ತಿವೆ. ಸರ್ವವನ್ನೂ ಬಲ್ಲ ನಿನಗೆ ನಾನು ಹೆಚ್ಚು ಹೇಳಬೇಕಾಗಿಲ್ಲ" ಎಂದ. ಶಿವನು "ಹೋಗಲಿ ಬಿಡಿ. ನೀವು ಅದನ್ನೆಲ್ಲ ಮರೆತು ಬಿಡಿ. ಅಲ್ಲಿನ ಜನರೇ ಪರಸ್ಪರ ಕಚ್ಚಾಡಿ ಒಂದಲ್ಲ ಒಂದು ದಿನ ಬುದ್ಧಿ ಕಲಿಯುತ್ತಾರೆ" ಎಂದು ಹೇಳಿದನಂತೆ!

ಇದು ಸ್ವಾರಸ್ಯಕರ ಕಲ್ಪಿತ ಪ್ರಸಂಗವೆನಿಸಿದರೂ, ಹನ್ನೆರಡನೆಯ ಶತಮಾನದಲ್ಲಿ ನಡೆದ ಸಮಾಜೋ-ಧಾರ್ಮಿಕ ಆಂದೋಲನದ ಆಶಯವೆಲ್ಲ ಈಗ ಹೇಗೆ ಮಣ್ಣುಗೂಡಿದೆ ಎಂಬುದರ ಸಂಕೇತವಾಗಿದೆ.

ಆರುನೂರು ವರ್ಷಗಳ ಸ್ಮರಣೀಯ ಇತಿಹಾಸವನ್ನು ಪಡೆದಿರುವ ಶ್ರೀ ಸಿದ್ಧಗಂಗಾ ಕ್ಷೇತ್ರ ನಮ್ಮ ದೇಶದ ಪವಿತ್ರ ಯಾತ್ರಾಸ್ಥಳ. ಧರ್ಮ-ದಾಸೋಹಗಳ ಮಹಾಮನೆ. ಕಲಿಕೆ-ಕಾಯಕಗಳ ದಿವ್ಯ ಕಮ್ಮಟ. ಜ್ಞಾನ-ಕ್ರಿಯೆಗಳ ಸಿದ್ಧಿಯ ಗದ್ದುಗೆ. ೧೨ನೆಯ ಶತಮಾನದಲ್ಲಿ ಬಸವಣ್ಣನವರ ಸಾರಥ್ಯದಲ್ಲಿ ನಡೆದ ಲೋಕಸೋಜಿಗದ ಶರಣಕ್ರಾಂತಿಯ ಸೋಜ್ವಲ ಕಿರಣ. ವಿದ್ವತ್ತಿನ ಹಿರಿಮೆ, ಅನುಭಾವ ಸಿದ್ಧಿ ಮತ್ತು ಸಮುದಾಯ ಸೇವೆಯ ಸಂಗಮದ ಜಂಗಮಕ್ಷೇತ್ರ ಸಿದ್ಧಗಂಗಾ!

ಶೂನ್ಯ ಸಿಂಹಾಸನದ ಗೋಸಲ ಸಿದ್ಧೇಶ್ವರರು ಶ್ರೀ ಸಿದ್ಧಗಂಗಾ ಮಠದ ಆದಿಗುರುಗಳು. ಆ ಪರಂಪರೆಯಲ್ಲಿ ಬಂದ ಶ್ರೀಮಠದ ನಿರಂಜನ ಚೇತನರು 'ಕರ್ನಾಟಕ ರತ್ನ' ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು.

ನಮ್ಮಲ್ಲಿ ಧರ್ಮಗುರುಗಳಿಗೆ ಕೊರತೆಯಿಲ್ಲ. ಆದರೆ ಕೊರತೆ ಇರುವುದು ಅರಿವಿನ ಗುರುಗಳದ್ದು. ಅನುಭಾವದ ಗುರುಗಳದ್ದು. ಜೀವಕಾರುಣ್ಯದ ಗುರುಗಳದ್ದು. ಲೋಕಪ್ರಜ್ಞೆಯ ಗುರುಗಳದ್ದು. ಅಂತಹ ಕೊರತೆಯನ್ನು ತುಂಬಿರುವ ಮತ್ತು ಧರ್ಮಗುರುಗಳು ಹೇಗಿರಬೇಕು ಎಂಬುದಕ್ಕೆ ಪ್ರತ್ಯಕ್ಷ ನಿದರ್ಶನ - ನಮ್ಮ ಸಿದ್ಧಗಂಗಾ ಪೂಜ್ಯರಾಗಿರುವ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು. ನಾವೀಗ ಅವರ ೧೧೫ನೆಯ ಜನ್ಮದಿನವನ್ನು ಆಚರಿಸುತ್ತಿದ್ದೇವೆ. ಇದು ನಮ್ಮೆಲ್ಲರ ಪರಮಭಾಗ್ಯವಾಗಿದೆ. ನಾವೆಲ್ಲ ಪುಣ್ಯಶಾಲಿಗಳು.

ಆತ್ಮಜ್ಞಾನಿ ಅಲ್ಲಮಪ್ರಭು ೧೨ನೆಯ ಶತಮಾನದ ಅಚ್ಚರಿ ಎನಿಸಿದ್ದರೆ, ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ೨೦-೨೧ನೆಯ ಶತಮಾನದ ಅಚ್ಚರಿ ಎನಿಸಿದ್ದಾರೆ. ಪೂಜ್ಯರು ನಮ್ಮಂತಹ ಲೌಕಿಕರ ಮಧ್ಯೆ ಇದ್ದರೂ ಲೋಕದ ಎಲ್ಲ ಹಂಗುಗಳನ್ನೂ ಹಿಂಗಿದ



ಮಹಾಲಿಂಗಸ್ವರೂಪಿಗಳು. ಅವರು ಸಿದ್ಧಗಂಗಾ ಶ್ರೀಕ್ಷೇತ್ರದಲ್ಲಿ ನಡೆಸಿರುವ ಸಾಗರ ಸದೃಶ ಜ್ಞಾನಾನ್ನ ದಾಸೋಹದ ಸೇವೆ ಸಮಕಾಲೀನ ಸಂದರ್ಭದ ಒಂದು ಸೋಜಿಗ!

ಸಿದ್ಧಗಂಗಾ ಶ್ರೀಕ್ಷೇತ್ರದ ಮಾನವೀಯ ಸೇವೆಗೆ ಆ ಪರಿಸರದಲ್ಲೇ ಇರುವ ನಿಸರ್ಗ ನಿರ್ಮಿತ ಸಿದ್ಧರಬೆಟ್ಟ, ಉದ್ದಾನ ವೀರಭದ್ರನ ಬೆಟ್ಟ, ರಾಮದೇವರ ಬೆಟ್ಟ, ಶಿವಗಂಗಾ ಬೆಟ್ಟ ಗುಡ್ಡಗಳು ಸಾಕ್ಷಿ ಹೇಳುವಂತಿವೆ.

ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಭಕ್ತಿಯ ಭಸ್ಮ ಲೇಪಿಸಿದವರು ಪೂಜ್ಯ ಶ್ರೀ ಅಟವೀ ಸ್ವಾಮಿಗಳು. ಸಿದ್ಧಿಯ ಪುಷ್ಪ ಮುಡಿಸಿದವರು ಪೂಜ್ಯ ಶ್ರೀ ಉದ್ದಾನ ಶಿವಯೋಗಿಗಳು. ಕೀರ್ತಿಯ ಕಳಶವಿಟ್ಟರೇ ನಮ್ಮ ಶಿವಕುಮಾರ ಮಹಾಸ್ವಾಮಿಗಳು. ಪೂಜ್ಯಶ್ರೀಗಳು ಜನ್ಮ ತಳೆದದ್ದು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿ ತಾಲೂಕಿನ ವೀರಾಪುರದಲ್ಲಿ. ಪೂಜ್ಯರ ಜನ್ಮದಿನಾಂಕ ೧೯೦೮ರ ಏಪ್ರಿಲ್ ಒಂದು. ಶ್ರೀ ಸಿದ್ಧಗಂಗಾ ಕ್ಷೇತ್ರದ ನಿರಂಜನ ಪಟ್ಟಾಧಿಕಾರ ಸ್ವೀಕರಿಸಿದ್ದು ೧೯೩೦ರಲ್ಲಿ.

ಬೆಂಗಳೂರಿನ ಕೇಂದ್ರ ಮಹಾವಿದ್ಯಾಲಯದಿಂದ ವಿಜ್ಞಾನ ಪದವಿ ಪಡೆಯುತ್ತಿದ್ದಂತೆ ಶ್ರೀ ಉದ್ದಾನ ಶಿವಯೋಗಿಗಳ ಕಾರುಣ್ಯದಿಂದ ಸಿದ್ಧಗಂಗಾ ಶ್ರೀ ಕ್ಷೇತ್ರದ ಸೇವಾ ದೀಕ್ಷೆ ವಹಿಸಿದ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಆ ಕ್ಷೇತ್ರವನ್ನು ಕಾಲದ ಒರೆಗಲ್ಲಿನ ಮೇಲೆ ಕಾಯಕ-ದಾಸೋಹಗಳ ಒಂದು ಮಹಾಕೇಂದ್ರವನ್ನಾಗಿ ಬೆಳೆಸಿದ್ದಾರೆ.

ಪೂಜ್ಯ ಶ್ರೀಗಳ ಸೇವೆಯ ವಿಶ್ವರೂಪ ದರ್ಶನಕ್ಕೆ ಬೇಸಗೆಯ ರಜದ ನಂತರ ಶಾಲಾ-ಕಾಲೇಜುಗಳು ಪುನರಾರಂಭವಾಗುವ ಸಂದರ್ಭದಲ್ಲಿ ಸಿದ್ಧಗಂಗಾ ಕ್ಷೇತ್ರಾವರಣವನ್ನು ನೋಡಬೇಕು. ಸಿದ್ಧಗಂಗಾ ಕ್ಷೇತ್ರದ ಸುತ್ತಮುತ್ತಿನ ಮತ್ತು ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಅಷ್ಟೇ ಅಲ್ಲ, ನೆರೆಯ ರಾಜ್ಯಗಳಿಂದಲೂ ಬಡಮಕ್ಕಳು ತಮ್ಮ ತಂದೆ-ತಾಯಿಗಳೊಂದಿಗೆ ತಲೆಯ ಮೇಲೆ ಪೆಟ್ಟಿಗೆ ಹೊತ್ತು ಸಾಲುಗಟ್ಟಿ ಬರುವ ಆ ದೃಶ್ಯ ನಿಜಕ್ಕೂ ಹೃದಯಸ್ಪರ್ಶಿ!

ಪೂಜ್ಯ ಶ್ರೀಗಳದ್ದು ತಾಯಿಯ ಕರುಳು. ಶ್ರೀಮಠದ ಆಶ್ರಯ ಬಯಸಿ ಬರುವ ಯಾವ ಬಡ ಮಕ್ಕಳನ್ನೂ ಹಿಂದಕ್ಕೆ ಕಳುಹಿಸುವುದಿಲ್ಲ. ಪ್ರತಿಯೊಬ್ಬ ವಿದ್ಯಾರ್ಥಿಯ ಸ್ಥಿತಿ-ಗತಿಗಳನ್ನು ತಾವೇ ಖುದ್ದಾಗಿ ಆಲಿಸಿ, ಶ್ರೀಮಠದಲ್ಲಿ ಯಾವುದೇ ಜಾತಿ-ಮತ ಭೇದವಿಲ್ಲದೆ ಉಚಿತ ಅನ್ನ, ಅಕ್ಷರ, ವಸತಿಗಳ ಆಶ್ರಯ ನೀಡುತ್ತಾರೆ.

ಶ್ರೀ ಸಿದ್ಧಗಂಗಾ ಮಠದಲ್ಲಿ ಪ್ರತಿನಿತ್ಯ ಹತ್ತು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ, ಕ್ಷೇತ್ರಕ್ಕೆ ನಿತ್ಯ ಬರುವ ಸುಮಾರು ೨೦೦೦ದಷ್ಟು ಯಾತ್ರಾರ್ಥಿಗಳಿಗೂ ಉಚಿತ ದಾಸೋಹ ವ್ಯವಸ್ಥೆ ಕಲ್ಪಿಸಲಾಗಿದೆ. ತಂದೆ-ತಾಯಿಗಳು ತಮ್ಮ ಮಕ್ಕಳನ್ನು ಒಮ್ಮೆ ಸಿದ್ಧಗಂಗಾ ಮಠಕ್ಕೆ ಸೇರಿಸಿದರೆಂದರೆ, ಅವರನ್ನು ತಾಯ ಮಡಿಲಲ್ಲಿ ಇಟ್ಟು ನೆಮ್ಮದಿಯ ಭಾವ ತಾಳುತ್ತಾರೆ.

ಶ್ರೀಮಠದ ಆವರಣದಲ್ಲಿ ಪ್ರತಿನಿತ್ಯ ಸಂಜೆವೇಳೆ ಸಮವಸ್ತ್ರ ಧರಿಸಿದ ಸಹಸ್ರ ಸಹಸ್ರ ಸಂಖ್ಯೆಯ ವಿದ್ಯಾರ್ಥಿಗಳು ಪೂಜ್ಯ ಶ್ರೀಗಳ ಪಾವನ ಸಾನ್ನಿಧ್ಯದಲ್ಲಿ ನಡೆಸುವ ಸಾಮೂಹಿಕ ಪ್ರಾರ್ಥನೆಯ ದೃಶ್ಯವನ್ನು ಕಣ್ಣಾರೆ ನೋಡಿಯೇ ಅನುಭವಿಸಬೇಕು.

ಶ್ರೀಮಠದ ದಾಸೋಹದ ಮನೆಗೆ ಭಕ್ತರು ತಮ್ಮ ಪಾಲಿನ ಅಳಿಲು ಸೇವೆ ಸಲ್ಲಿಸುವುದು ಊಹೆಗೂ ನಿಲುಕದ್ದು. ಲಿಂಗೈಕ್ಯ ಅಟವೀ ಸ್ವಾಮಿಗಳ ಶುದ್ಧ ಸಂಕಲ್ಪ, ಶ್ರೀ ಸಿದ್ಧಲಿಂಗೇಶ್ವರರ ದಿವ್ಯ ಕಾರುಣ್ಯ. ಇಲ್ಲಿಗೆ ೧೧೦ ವರ್ಷಗಳ ಹಿಂದೆ ಅಲ್ಲಿನ ದಾಸೋಹದ ಅಡುಗೆಯ ಮನೆಯ ಒಲೆಯಲ್ಲಿ ಹತ್ತಿಸಿದ ಬೆಂಕಿ ಒಂದು ದಿನವೂ ಆರಿಲ್ಲ. ಅದು ಆರುವುದೂ ಇಲ್ಲ. ಏಕೆಂದರೆ, ಅದು ಬರೀ ಕಟ್ಟಿಗೆಯ ಬೆಂಕಿಯಲ್ಲ; ಶ್ರೀಮಠದ ತಪಸ್ವಿಗಳ ಸತ್ಸಂಕಲ್ಪದ ನಿತ್ಯಜ್ಯೋತಿ!

ಶ್ರೀಮಠದ ಆಶ್ರಯದಲ್ಲಿರುವ ೧೨೫ಕ್ಕೂ ಹೆಚ್ಚು ಶಿಕ್ಷಣ ಸಂಸ್ಥೆಗಳಲ್ಲಿ, ಪೂರ್ವ ಪ್ರಾಥಮಿಕ ಹಂತದಿಂದ ಸ್ನಾತಕೋತ್ತರ ಪದವಿ ಹಂತದವರೆಗೆ ೩೫ ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳು ಕಲಿಯುತ್ತಾರೆ. ಇಲ್ಲಿ ಕಲಿತ ಸಹಸ್ರಾರು ಗ್ರಾಮೀಣ ವಿದ್ಯಾರ್ಥಿಗಳು ದೇಶ-ವಿದೇಶಗಳಲ್ಲಿ ವಿವಿಧ ಹುದ್ದೆಗಳಲ್ಲಿ ಉದ್ಯೋಗದಲ್ಲಿದ್ದಾರೆ.

ಶ್ರೀಮಠದ ಆಶ್ರಯದಲ್ಲಿ ಶಿಕ್ಷಣ ಪಡೆದು ಮುಂದೆ ದೊಡ್ಡವರಾಗಿ ಬೆಳೆದವರೆಲ್ಲ ಸೇರಿ 'ಹಿರಿಯ ವಿದ್ಯಾರ್ಥಿಗಳ ಸಂಘ' ಕಟ್ಟಿದ್ದಾರೆ. ಒಂದು ರೀತಿಯಲ್ಲಿ ಈ ಸಂಘವೇ ಶ್ರೀಮಠದ ಸೇವೆಯ ಸಂಪನ್ಮೂಲವಾಗಿದೆ.

ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಕಾರುಣ್ಯದ ಇನ್ನೊಂದು ತೊಟ್ಟಿಲೆಂದರೆ ಅಂಧರು ಮತ್ತು







ಅಂಗನ್ಯೂನರ ಶಾಲೆ. ಈ ಶಾಲೆಯಿಂದಾಗಿ ನೂರಾರು ಅಂಧರು ಮತ್ತು ಅಂಗನ್ಯೂನರು ತಮ್ಮ ಬದುಕಿನ ಹಾದಿ ಕಂಡುಕೊಂಡಿರುವುದಷ್ಟೇ ಅಲ್ಲ ಅನೇಕರು ತಮ್ಮಂತಹ ಅಂಧರು ಮತ್ತು ಅಂಗನ್ಯೂನರ ಸೇವೆ ಸಲ್ಲಿಸುತ್ತಿದ್ದಾರೆ. ಶ್ರೀಮಠದಲ್ಲಿ ಶ್ರವಣ ದೋಷವಿರುವ ಮಕ್ಕಳಿಗೆ ವಿಶೇಷ ಶಿಕ್ಷಣದ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ. ಪೂಜ್ಯ ಶ್ರೀಗಳಿಗೆ ಅಂತಹ ಅಸಹಾಯಕ ಮಕ್ಕಳ ಬಗೆಗೆ ಅಪಾರ ಕರುಣೆ.

ಸಿದ್ಧಗಂಗಾ ಶ್ರೀಕ್ಷೇತ್ರದಲ್ಲಿ ನಡೆಯುವ ವಾರ್ಷಿಕ ಶ್ರೀ ಸಿದ್ಧಲಿಂಗೇಶ್ವರ ಜಾತ್ರೆಯಂತು ಲಕ್ಷ-ಲಕ್ಷಾಂತರ ಭಕ್ತರಿಗೆ ಸಂಭ್ರಮದ ಸಂದರ್ಭ. ಆ ಸಂದರ್ಭದಲ್ಲಿ ನಡೆಯುವ ಕೃಷಿ-ಕೈಗಾರಿಕಾ ವಸ್ತು ಪ್ರದರ್ಶನ ನಾಡಿಗೆಲ್ಲ ಪ್ರಸಿದ್ಧ. ದನಗಳ ಪರಿಸೆಯೂ ನಮ್ಮ ಗ್ರಾಮೀಣರಿಗೆ ಒಂದು ದೊಡ್ಡ ಅವಕಾಶ. ಜಾತ್ರೆ ಸಂದರ್ಭದಲ್ಲಿ ಸೇರುವ ಲಕ್ಷಾಂತರ ಸಂಖ್ಯೆಯ ಜನರಿಗೆ ವಾರಗಟ್ಟಲೆ ದಾಸೋಹ ಸೇವೆಯನ್ನು ನಡೆಸಲು ನೂರಾರು ಚೀಲಗಟ್ಟಲೆ ದವಸ ಧಾನ್ಯ ಮತ್ತು ತರಕಾರಿ ಬೇಕಾಗುತ್ತದೆ. ಅಷ್ಟು ಬೃಹತ್ ಪ್ರಮಾಣದ ಸಾಮಗ್ರಿಗಳೆಲ್ಲ ಒದಗಿಬರುವುದು ಶ್ರೀಮಠದ ಭಕ್ತರಿಂದ.

ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳು ದೈಹಿಕವಾಗಿ ದೃಢವಾಗಿದ್ದಾಗ ಶ್ರೀಮಠದ ಕಟ್ಟಡಗಳ ನಿರ್ಮಾಣಕ್ಕೆ ಸ್ವತಃ ಕಲ್ಲು ಹೊತ್ತಿದ್ದಾರೆ. ಹೊಲಗದ್ದೆಗಳಲ್ಲಿ ದುಡಿದಿದ್ದಾರೆ. ದಿನಕ್ಕೆ ಕೇವಲ ಎರಡು-ಮೂರು ಗಂಟೆಗಳ ಕಾಲ ಮಾತ್ರ ವಿಶ್ರಾಂತಿ ಪಡೆಯುವ ಪೂಜ್ಯರು ತಮ್ಮ ಸಮಯವನ್ನೆಲ್ಲ ಜನಸೇವೆಗಾಗಿಯೇ ಮೀಸಲಿಟ್ಟಿದ್ದಾರೆ. ಅವರು ಮಾಡುವ ಶಿವಪೂಜೆ, ಸಲ್ಲಿಸುವ ಪ್ರಾರ್ಥನೆ, ನೀಡುವ ಆಶೀರ್ವಚನ ಎಲ್ಲವೂ ಲೋಕ-ಸೇವೆಗೆ ಸಮರ್ಪಿತ. ತಾನು ಉರಿದು ಲೋಕಕ್ಕೆ ಬೆಳಕು ನೀಡುವ ದೀಪದಂತೆ ಪೂಜ್ಯ ಶ್ರೀಗಳದ್ದು ಪಾವನ ಜೀವನ!

'ಲೋಕವೇ ನಮ್ಮ ಮನೆ, ಸೇವೆಯೇ ನಮ್ಮುಸಿರು, ಪ್ರೀತಿ ಸೌಹಾರ್ದವಿರಲು ಬೇಡ ಯಾವುದೇ ಹೆಸರು' ಎನ್ನುತ್ತಿದ್ದ, 'ನಡೆ-ನುಡಿಗಳೊಂದಾಗಿ ಕಾಯಕವ ಹಿಡಿಯೋಣ. ಒಡಗೂಡಿ ಬಂದುದನು ದಾಸೋಹ ಮಾಡೋಣ' ಎನ್ನುತ್ತಿದ್ದ, 'ಕತ್ತಲೆಯ ತೊಲಗಿಸಲು ಹಣತೆಯನು ಹಚ್ಚೋಣ, ಸುತ್ತಲಿನ ಬಡಜನರ ಕಣ್ಣೀರ ಒರೆಸೋಣ' ಎನ್ನುತ್ತಿದ್ದ, 'ಹೊಸ ಜೀವ, ಹೊಸ ಭಾವ ಸರ್ವರೊಳು ಬಿತ್ತೋಣ, ವಿಶ್ವಮಾನವರಾಗಿ ಸುಖಶಾಂತಿ ನೆಲೆಸೋಣ' ಎನ್ನುತ್ತಿದ್ದ, ಹನ್ನೊಂದು ದಶಕಗಳ ಕಾಲ ಲೋಕದಲ್ಲಿದ್ದು ಕರ್ತನಟ್ಟಿದ ಮಣಿಹ ಮುಗಿಯಿತೆಂದು ಬಟ್ಟ ಬಯಲಿನಲ್ಲಿ ಲೀನವಾಗಿರುವ ಪರಮಪೂಜ್ಯ ಶ್ರೀ ಶಿವಕುಮಾರ ಸ್ವಾಮೀಜಿ ಅವರ ೧೧೫ನೆಯ ಜನ್ಮಜಯಂತಿ ಈ ಗುರುವಂದನೆ ಸಲ್ಲಿಸಬೇಕಾದ ನಾನು ಇದಕ್ಕಿಂತ ಹೊಸದಾಗಿ ಹೇಳುವುದು ಏನಾದರೂ ಇದೆ ಎಂದು ತಿಳಿದಿಲ್ಲ.

ಆದರೂ, ಸಂದರ್ಭದ ಔಚಿತ್ಯಕ್ಕಾಗಿ ನಾಲ್ಕು ಮಾತು ಆಡುತ್ತಿದ್ದೇನೆ. ಶಿವಯೋಗಿ ಸಿದ್ಧರಾಮ ಹೇಳಿರುವ 'ಗುರುವಾದಡೆಯೂ ಬಸವಣ್ಣನೆ ಬೇಕು. ಲಿಂಗಕ್ಕಾದಡೆಯೂ ಬಸವಣ್ಣನೆ ಬೇಕು, ಜಂಗಮಕ್ಕಾದಡೆಯೂ ಬಸವಣ್ಣನೆ ಬೇಕು. ಕಪಿಲಸಿದ್ಧಮಲ್ಲಿಕಾರ್ಜುನಾ ನಿಮಗೂ, ಎನಗೂ ಶರಣರಿಗೂ ಬಸವಣ್ಣನೆ ಬೇಕು' ಎಂಬ ವಚನದಂತೆ ಬಸವಣ್ಣನನ್ನೇ ಉಸಿರಾಡುತ್ತಿದ್ದ ಕಾಯಕಯೋಗಿ, ದಾಸೋಹ ಮೂರ್ತಿ ಪರಮಪೂಜ್ಯ ಲಿಂ. ಶ್ರೀ ಶಿವಕುಮಾರ ಮಹಾಸ್ವಾಮಿಗಳು.

ಇದು, ಧರ್ಮಗುರುಗಳಾದವರು, ತಮ್ಮ ಆಧ್ಯಾತ್ಮಿಕ ಸಾಧನೆಯಿಂದ, ಸಾತ್ವಿಕ ನಡೆ-ನುಡಿಗಳಿಂದ, ಸ್ವಹಿತ ಮೀರಿದ ಸೇವೆಯಿಂದ, ಧರ್ಮ ಮತ್ತು ವಿಜ್ಞಾನ ವಿಚಾರಗಳ ಸಮನ್ವಯದಿಂದ, ಜ್ಯೋತಿರ್ಲಿಂಗದ ಮಾತಿನಿಂದ, ಅನಿರ್ವಚನೀಯ ಅಂತರ್ಮನದಿಂದ, ಮಿಗಿಲಾದ ಲೋಕಪ್ರಜ್ಞೆಯಿಂದ ಹೇಗೆ ಜನಸಮುದಾಯದ ಭಕ್ತಿ-ಗೌರವಗಳಿಗೆ ಪಾತ್ರವಾಗಬಹುದು ಎಂಬುದಕ್ಕೆ ಪ್ರತ್ಯಕ್ಷ ನಿದರ್ಶನವಾಗಿದ್ದ ಲಿಂ. ಪೂಜ್ಯರು ಸಲ್ಲಿಸಿರುವ ಲೋಕಸೇವೆಗೆ ನಾವು ಅರ್ಪಿಸಬೇಕಾದ ಕೃತಜ್ಞತೆಯ ಸಂದರ್ಭವೆಂದೇ ನಾನು ಭಾವಿಸಿದ್ದೇನೆ.

ಕೆಲವರ ದೃಷ್ಟಿಯಲ್ಲಿ ಇದೊಂದು ಧಾರ್ಮಿಕ ಶ್ರದ್ಧೆಯ ಭಾವನಾತ್ಮಕ ಕಾರ್ಯಕ್ರಮ ಎಂದೆನಿಸಿದರೂ, ವಾಸ್ತವವಾಗಿ, ಇದು ಸೇವಾ ಪರಂಪರೆಯ ಒಂದು ಸಂಕಲ್ಪದ ಕಾರ್ಯಕ್ರಮ. ಸಮುದಾಯ ಸಾಮರಸ್ಯದ ಒಂದು ಸಾರ್ವಜನಿಕ ಕಾರ್ಯಕ್ರಮ. ದಾರ್ಶನಿಕ ಚೇತನವೊಂದನ್ನು ಸ್ಮರಿಸುವ ಸಾಂಸ್ಕೃತಿಕ ಕಾರ್ಯಕ್ರಮ. ಈ ಕಾರಣದಿಂದಾಗಿ ಲಿಂ. ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಜನ್ಮಜಯಂತಿ ಎಲ್ಲೇ ನಡೆದರೂ, ಯಾರೇ ನಡೆಸಿದರೂ ಅದಕ್ಕೆ ಸಾರ್ವತ್ರಿಕ ಮಹತ್ವವಿರುತ್ತದೆ ಎಂದು ಬೇರೆ ಹೇಳಬೇಕಾಗಿಲ್ಲ.

ನಿಜ. ನಮಗೆ ಅತ್ಯಂತ ಪುರಾತನ ಪರಂಪರೆಯಿದೆ. ರೋಮಾಂಚಕಾರಿ ಇತಿಹಾಸವಿದೆ. ವೇದೋಪನಿಷತ್ತು ಮತ್ತು ವಚನ ಸಾಹಿತ್ಯದ ಅದ್ವಿತೀಯವಾದ ಹಿನ್ನೆಲೆಯಿದೆ. ನಾಗರಿಕತೆಯ ಸುದೀರ್ಘ ಚರಿತ್ರೆಯಿದೆ. ಧರ್ಮ ಮತ್ತು







ಸಂಸ್ಕೃತಿಗಳ ಸಮೃದ್ಧ ಸಂಪತ್ತಿದೆ. ನ್ಯಾಯ ಶಾಸ್ತ್ರ, ವಿಜ್ಞಾನ, ಸಮಾಜ ಶಾಸ್ತ್ರ, ಅರ್ಥಶಾಸ್ತ್ರ, ಶಿಕ್ಷಣ ಮತ್ತಿತರ ಕ್ಷೇತ್ರ ತಜ್ಞರಿದ್ದಾರೆ. ಆದರೂ, ಇಂದು ಜಗತ್ತು ಒಂದು ರೀತಿಯ ಅಸ್ವಸ್ಥ ಮತ್ತು ಅನಿಶ್ಚಿತ ಬದುಕಿನ ಸಂಶಯ ಮತ್ತು ಭಯದ ವಾತಾವರಣದಲ್ಲಿ ಇರುವಂತೆ ಆಗಿರುವುದು ನಿಜಕ್ಕೂ ವಿಪರ್ಯಾಸ.

ಅನೇಕ ವೇಳೆ ಕಲಿತವರೆನ್ನುವವರ ಕುಚೇಷ್ಟೆಯಿಂದ ಹಚ್ಚಲ್ಪಟ್ಟ ಬೆಂಕಿಯ ಜ್ವಾಲೆ ಅಮಾಯಕರನ್ನು ಬಲಿತೆಗೆದುಕೊಳ್ಳುತ್ತಿದೆ. ಸಮುದಾಯದ ಜೀವನ ನೆಮ್ಮದಿಯೇ ಹಾಳಾಗುತ್ತಿದೆ. ಮುಗ್ಧ ಜನರಿಗೆ ಸಲ್ಲದ ಆಸೆ-ಆಮಿಷಗಳನ್ನು ತೋರಿಸಿ, ತಮ್ಮ ಬೇಳೆ ಬೇಯಿಸಿ ಕೊಳ್ಳುತ್ತಿರುವ ಕ್ಷುದ್ರ ಶಕ್ತಿಗಳಿಂದಾಗಿ, ಸಾಮಾಜಿಕ ಕನ್ನಡಿಯೇ ಒಡೆದು ನುಚ್ಚು ನೂರಾಗುತ್ತಿದೆ. ವಿದೇಶಿ ಅನುಕರಣೆಯ ಅಬ್ಬರದಲ್ಲಿ ಜನರ ಸಹಜ ಸಜ್ಜನಿಕೆ-ಸಭ್ಯತೆಗಳೇ ಕಣ್ಮರೆಯಾಗುತ್ತಿವೆ.

ಇಂತಹ ಸಂದಿಗ್ಧ, ನಿರಾಶಾದಾಯಕ ಮತ್ತು ಕಳವಳಕಾರಿ ಸನ್ನಿವೇಶದಲ್ಲಿ ನಮಗಿರುವ ಏಕಮಾತ್ರ ಭರವಸೆಯ ಬೆಳಕೆಂದರೆ, ಬುದ್ಧ-ಬಸವಾದಿ ದಾರ್ಶನಿಕರ ವಿಚಾರಧಾರೆ. ಆ ದಾರ್ಶನಿಕರಿದ್ದ ಕಾಲದ ಧಾರ್ಮಿಕ, ರಾಜಕೀಯ, ಸಾಮಾಜಿಕ ಅಸಂಗತಗಳು ಇಂದೂ ಮುಂದುವರೆದಿವೆ. ಅಷ್ಟೇ ಅಲ್ಲ, ಅವರ ಆದರ್ಶವನ್ನು ನಾವು ಮರೆತಿರುವ ಕಾರಣ, ಅಂದಿನ ಪರಿಸ್ಥಿತಿ ಮತ್ತಷ್ಟು ವಿಕಾರಗೊಂಡು ಸಮುದಾಯದ ಒಟ್ಟು ನೆಮ್ಮದಿಯನ್ನೇ ನಾಶಗೊಳಿಸುತ್ತಿದೆ. ಆಗಿರುವ ಬದಲಾವಣೆ ಎಂದರೆ ವಿದೇಶಿಯರ ಆಳ್ವಿಕೆ ಹೋಗಿ ಸ್ವದೇಶಿಯರ ಆಳ್ವಿಕೆ ಬಂದಿದೆ. ಆದರೆ ಈಗ ನಮಗೆ ನಾವೇ ಇರಿದುಕೊಳ್ಳುವ ದುರವಸ್ಥೆಯಲ್ಲಿದ್ದೇವೆ.

ಮಹಾಕವಿ ಕುವೆಂಪು ಅವರು ನಮ್ಮ ಇಂದಿನ ಪರಿಸ್ಥಿತಿಯನ್ನು ಕಂಡು, 'ಕತ್ತಿ ಪರದೇಶಿಯಾದರದು ನೋವೆ? ನಮ್ಮವರೆ ಹದ ಹಾಕಿ ತಿವಿದರದು ಹೂವೆ?' ಎಂದಿದ್ದಾರೆ. ಈ ಕವಿವಾಣಿಯ ಸತ್ಯದ ಅರ್ಥ ನಮಗಿನ್ನೂ ಆದಂತೆ ಕಾಣುವುದಿಲ್ಲ. ಇದಕ್ಕೆ ಜಾತಿ-ಮತ-ಧರ್ಮಗಳ ಹೆಸರಿನಲ್ಲಿ, ಪಕ್ಷ-ಪಂಗಡಗಳ ನೀತಿ-ಧೋರಣೆಗಳ ಪ್ರತಿಷ್ಠೆಯಲ್ಲಿ ಈಗ ಎಲ್ಲ ಕಡೆ ನಡೆಯುತ್ತಿರುವ ಹಿಂಸಾಚಾರಗಳೇ ಸಾಕ್ಷಿಯಾಗಿವೆ.

ಇದನ್ನೆಲ್ಲ ಕಣ್ಣಾರೆ ಕಂಡಿದ್ದ ಲಿಂ. ಸಿದ್ಧಗಂಗಾ ಪೂಜ್ಯರು ಸಮುದಾಯದಲ್ಲಿ ಸಂಯಮ, ಶಾಂತಿ-ಸೌಹಾರ್ದಗಳನ್ನು ಮೈಗೂಡಿಸಲು, ತಮ್ಮ ಇಡೀ ಜೀವನವನ್ನು ಮೀಸಲಿಟ್ಟಿದ್ದರೆಂಬುದು ಲೋಕವಿದಿತ ಸಂಗತಿ. ಪೂಜ್ಯರು ಮಾನವೀಯತೆ ಮತ್ತು ರಾಷ್ಟ್ರೀಯತೆಗಳ ಸಂಗಮವಾಗಿದ್ದರು. ಅವರ ಬದುಕೇ ಒಂದು ದಾಖಲೆಯ ಇತಿಹಾಸ. ಅವರ ಜೀವನವನ್ನು ಅವಲೋಕಿಸಿದಾಗ, ನಮಗೆ ಸ್ಪಷ್ಟವಾಗಿ ಕಂಡುಬರುವ ಮೂರು ಮಹತ್ವದ ಜೀವನ ಸೂತ್ರಗಳೆಂದರೆ – ಶರಣರು ಹೇಳಿರುವ ಕಾಯಕ, ದಾಸೋಹ ಮತ್ತು ಅನುಭಾವ ಚಿಂತನ. ವಾಸ್ತವವಾಗಿ, ಈ ಸೂತ್ರಗಳು ಮಾನವ ಪ್ರಾಣಿಯನ್ನು ಮಾನವ ವ್ಯಕ್ತಿಯನ್ನಾಗಿ ಮಾಡುವ ನೀತಿಸಂಹಿತೆಗಳಾಗಿವೆ.

'ದೇವನೊಬ್ಬನೇ ಅವನನ್ನು ನಂಬು. ಅವನು ನಿನಗಿಂತ ಭಿನ್ನನಲ್ಲ. ಸೃಷ್ಟಿಯ ಸಕಲ ಜೀವರಾಶಿಗಳಲ್ಲೂ ದೇವರಿದ್ದಾನೆ. ನೀವು ಸದಾ ಕ್ರಿಯಾಶೀಲರಾಗಿ, ನೀತಿಬದ್ಧರಾಗಿ ದುಡಿದು, ಅದರಿಂದ ಬರುವ ಫಲವನ್ನು ಅಸಹಾಯಕರಿಗೆ ಹಂಚಿ ಉಣ್ಣಬೇಕು. ಲೋಕಜೀವನದಲ್ಲಿ ವಿವೇಕ ಮತ್ತು ವಿನಯಗಳನ್ನು ತುಂಬಿಕೊಂಡಿರಬೇಕು. ಅನ್ಯಾಯದ ವಿರುದ್ಧ ಹೋರಾಡುವ ಆತ್ಮಸ್ಥೈರ್ಯ ಮತ್ತು ನೈತಿಕ ಬಲಗಳನ್ನು ಮೈಗೂಡಿಸಿಕೊಳ್ಳಬೇಕು. ನಿಮ್ಮಲ್ಲಿ ಸಮಷ್ಟಿ ಹಿತದೃಷ್ಟಿ ಮತ್ತು ಸಮಗ್ರ ರಾಷ್ಟ್ರೀಯ ದೃಷ್ಟಿಗಳು ಸದಾ ಜಾಗೃತವಾಗಿರಬೇಕು' – ಇದು ಲಿಂ. ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಒಟ್ಟು ಸಂದೇಶವಾಗಿತ್ತು. ಅವರು ಸಾರುತ್ತಿದ್ದ ಈ ತ್ರಿಕಾಲ ಸತ್ಯಗಳು ಯಾವ ದೇಶಕ್ಕೆ ಬೇಡ? ಯಾವ ಜನಾಂಗಕ್ಕೆ ಬೇಡ? ಯಾವ ಕಾಲಕ್ಕೆ ಬೇಡ?

'ಧರ್ಮ' ಎಂಬ ಶಬ್ದಕ್ಕೆ ವಿಶ್ವದ ಅನೇಕ ಧರ್ಮಸಿದ್ಧಾಂತಿಗಳು, ವಿಚಾರವಾದಿಗಳು ತಮ್ಮ ತಮ್ಮದೇ ಆದ ರೀತಿಯಲ್ಲಿ, ತಮ್ಮ ತಮ್ಮದೇ ಆದ ಮಾತುಗಳಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಆದರೆ, ಲಿಂ. ಸಿದ್ಧಗಂಗಾ ಶ್ರೀಗಳು ಅರ್ಥೈಸಿದ, ಆಚರಿಸಿದ ಧರ್ಮ ಯಾವುದೇ ನಿರ್ದಿಷ್ಟ ಸ್ಥಳ ಅಥವಾ ಸನ್ನಿವೇಶಗಳಿಗೆ ಸೀಮಿತವಾದುದಲ್ಲ. ಸಮಸ್ತ ಮಾನವಸಮುದಾಯಕ್ಕೇ ಸರ್ವಾನ್ವಯವಾಗುವಂತಹದು. ಪೂಜ್ಯ ಶ್ರೀಗಳ ದೃಷ್ಟಿಯಲ್ಲಿ ಧರ್ಮಸೂತ್ರವೆಂದರೆ ಸಂಘಟಿತ ಸ್ನೇಹ, ಆಂತರಿಕ ಅನ್ವೇಷಣೆ, ವಿಚಾರ ಮತ್ತು ವಿಧಾನ ಅಥವಾ ನುಡಿ ಮತ್ತು ನಡೆಗಳ ನಡುವೆ ಭಿನ್ನತೆ ಇಲ್ಲದಿರುವುದೇ ಧರ್ಮ. ಪೂಜ್ಯರ ಮಾತಿನಲ್ಲೇ ಹೇಳುವುದಾದರೆ, ಧರ್ಮ ಎಂದರೆ ನ್ಯಾಯ; ಸತ್ಯ, ಸ್ವಾತಂತ್ರ್ಯ ಮತ್ತು ಪಾವಿತ್ರ್ಯ.

ಇದಕ್ಕೆ ಸಂಬಂಧಿಸಿದಂತೆ, ನಾನು ಆಗಾಗ ಉಲ್ಲೇಖಿಸುವ ಲಿಂ. ಮಹದೇವ ಬಣಕಾರರ ಒಂದು ವಚನವಿದೆ: ವಿಷಯಾಸಕ್ತಂಗೆ ವಿರಕ್ತನೆಂದು ಕರೆದಡೆ ವೇಷವ ಧರಿಸಿದ ರಾಜಂಗೆ ಕಪ್ಪವ ಕೊಟ್ಟಂತಾಯಿತ್ತು. ಇಹದಾಸೆಯ ಅಳಿಮನದ ನರನಿಗೆ ಗುರುವೆಂದು ಕರೆದಡೆ, ಬಾಯಾರಿಕೆಗೆ ಬಚ್ಚಲ ನೀರ ಕುಡಿದಂತಾಯಿತ್ತು. ಜ್ಞಾನ ನಿಷ್ಪತ್ತಿಯಾಗಿ, ಸ್ವಯಂವರಿಯದ ಜಾತಿ ಸೂತಕಂಗೆ ಜಂಗಮವೆಂದು ಕರೆದಡೆ, ಹೆಣ್ಣಬೊಂಬೆಯ ಕೊಂಡು ಗಂಡನಾದಂತೆ, ಸದ್ಭಕ್ತಿ, ಸದಾಚಾರ, ಸದುವಿನಯ ಗಳವಧರಿಸಿ, ಅಂಗ ಗುಣಗಳ ಕಳೆಯದೆ ಲಿಂಗಪೂಜೆಯ ಮಾಡಿದಡೆ, ನಪುಂಸಕನು ಸಂತಾನ ಬಯಸಿದಂತೆ ಕಾಣಾ, ಎನ್ನ ವರಗುರು ಶಿವಕುಮಾರ ಪ್ರಭುವೇ'. ಈ ವಚನ ಕೆಲವರಿಗೆ ಕಟುವೆನಿಸಿದರೂ, ದಿಟವನ್ನೇ ಹೇಳಿದೆ. ನುಡಿದಂತೆ ನಡೆಯದಿದ್ದರೆ, ಎಂತಹ ವಿಪರ್ಯಾಸ ವಾಗುತ್ತದೆ ಎನ್ನುವುದನ್ನು ಈ ವಚನ ಎಲ್ಲರನ್ನೂ ತಿವಿದು ಹೇಳುತ್ತದೆ.

ಲಿಂ. ಪೂಜ್ಯ ಸಿದ್ಧಗಂಗಾ ಶ್ರೀಗಳು ಕೇವಲ ಭಾವನಾ ಜೀವಿಗಳಾಗಿರಲಿಲ್ಲ; ವಾಸ್ತವವಾದಿಗಳಾಗಿದ್ದರು. ಅವರು ತೋರಿಕೆಯ ವಿರಕ್ತರಾಗದೆ, ವೀರ ವಿರಾಗಿಗಳಾಗಿದ್ದರು. ಅವರು ಜಾತಿವಾದಿಗಳಾಗದೆ ಜಾತ್ಯಾತೀತರಾಗಿದ್ದರು. ಮಾನವ ಜೀವನದ ನೆಮ್ಮದಿಗೆ ಧರ್ಮ ಮತ್ತು ವಿಜ್ಞಾನಗಳೆರಡೂ ಅಗತ್ಯವೆಂದು ನಂಬಿದ್ದವರು. ಹಾಗಾಗಿ ಜಾಗೃತ ಮತ್ತು ವೈಚಾರಿಕ ಪ್ರಜ್ಞೆಯ ಸಮಾಜ ಅವರ ಹಂಬಲವಾಗಿತ್ತು.

ಇಲ್ಲಿಗೆ ಒಂಬತ್ತು ಶತಮಾನಗಳ ಹಿಂದೆ, ಸರಿ ಸುಮಾರು ಬಸವಣ್ಣನವರ ಕಾಲದಲ್ಲೇ ಇದ್ದ ಶಿರಾಜ್ ದರ್ವೇಶ್ ಎಂಬ ಸೂಫಿ ಸಂತ – 'ನಾನು ಸಂತೆಯಲ್ಲಿ, ಮಠದಲ್ಲಿ ಕೇವಲ ಪರಮಾತ್ಮನನ್ನು ಕಂಡೆ. ಬೆಟ್ಟದ ಮೇಲೆ, ಕಣಿವೆಗಳಲ್ಲಿ ಪರಮಾತ್ಮನನ್ನು ಕಂಡೆ. ಕಷ್ಟ ಬಂದಾಗಲಂತೂ ಅವನು ನನ್ನ ಪಕ್ಕದಲ್ಲೇ ಇರುವುದನ್ನು ಕಂಡೆ. ಸ್ನೇಹದಲ್ಲಿ, ಸೌಭಾಗ್ಯದಲ್ಲಿ ನಾನು ಕೇವಲ ಪರಮಾತ್ಮನನ್ನು ಕಂಡೆ. ಪೂಜೆಯಲ್ಲಿ, ಪ್ರಾರ್ಥನೆಯಲ್ಲಿ, ಚಿಂತನೆಯಲ್ಲಿ ನನಗೆ ಪರಮಾತ್ಮನಲ್ಲದೆ ಬೇರೆ ಏನೂ ಕಾಣಿಸಲಿಲ್ಲ. ನಾನು ಕಂಡ ಪರಮಾತ್ಮನ ಮುಖದ ಬೆಳಕಿನಲ್ಲಿ ಸುತ್ತ ಮುತ್ತ ನೋಡಿದೆ. ಎಲ್ಲ ಕಡೆಯೂ ಕಂಡ ಶೂನ್ಯದಲ್ಲಿ ನಾನು ಲೀನವಾಗಿ ಹೋದೆ. ನನಗೆ ಅನಂತವಾದ, ಅನಿರ್ವಚನೀಯವಾದ ಒಂದು ಸ್ಥಿತಿ ದೊರಕಿತ್ತು. ಏಕೆಂದರೆ, ನಾನು ಕೇವಲ ಪರಮಾತ್ಮನನ್ನು ಕಂಡಿದ್ದೆ' ಎಂದಿದ್ದಾನೆ.

ಈ ಮಾತುಗಳನ್ನೇ ಸಿದ್ಧಗಂಗಾ ಶ್ರೀಗಳಾಗಿದ್ದ ಲಿಂ. ಡಾ. ಶಿವಕುಮಾರ ಮಹಾಸ್ವಾಮಿಗಳಿಗೆ ಅನ್ವಯಿಸಿ ಹೇಳುವುದಾದರೆ, ಅವರು ಕುಳಿತಲ್ಲಿ, ನಿಂತಲ್ಲಿ, ಪೂಜೆಯಲ್ಲಿ, ಪ್ರಸಾದದಲ್ಲಿ, ಪ್ರಯಾಣದಲ್ಲಿ, ಪ್ರವಚನದಲ್ಲಿ ಕಾಣುತ್ತಿದ್ದುವೆಂದರೆ ದೈವೀ ಸ್ವರೂಪದ ಜನಸಮುದಾಯವನ್ನು. ಅವರು ಧ್ಯಾನದಲ್ಲಿ, ಮೌನದಲ್ಲಿ ವಿಚಾರ ಮಾಡುತ್ತಿದ್ದುದು ಜನಸೇವೆಯನ್ನು. ಆ ಜನಸೇವೆಯ ಮಹಾಬೆಳಗಿನಲ್ಲಿ ಬಯಲಾಗಿದ್ದಾರೆ.

ಅನುಭಾವಿಗಳು ಹೇಳುವಂತೆ ಜೀವನ ಒಂದು ದೀಪ. ಈ ದೀಪ ಉರಿಯಲು ಬೇಕಾದ ಎಣ್ಣೆ-ಬತ್ತಿಗಳೆಂದರೆ ಆತ್ಮ ಸಂಯಮ (Self Control) ಮತ್ತು ಅವಿರಳ ತಾಳ್ಮೆ (Eternal Patience) ಪ್ರತಿಯೊಬ್ಬ ವ್ಯಕ್ತಿಯೂ ಅಂತಹ ಜೀವನ ಜ್ಯೋತಿಯಾಗಬೇಕೆಂಬ ಮಹತ್ವದ ಆಶಯವನ್ನು ಹೊಂದಿದ್ದ ಲಿಂ. ಪೂಜ್ಯರ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಭೇಟಿ ನೀಡಿದ್ದ ನಮ್ಮ ದೇಶದ ಗೌರವಾನ್ವಿತ ಪ್ರಧಾನಿಯಾಗಿದ್ದ ಅಟಲ್ ಬಿಹಾರಿ ವಾಜಪೇಯಿ ಅವರು, ಹೇಳಿರುವ ಒಂದು ಮಾತನ್ನು ಈ ಸಂದರ್ಭದಲ್ಲಿ ಉಲ್ಲೇಖಿಸಬಯಸುತ್ತೇನೆ: In Siddaganga one observes several Gangas flowing. There is the Ganga of Kayaka; the Ganga of knowledge, the Ganga of understanding and also the Ganga of compassion' ಎಂದರೆ "ಸಿದ್ಧಗಂಗಾ ಕ್ಷೇತ್ರದಲ್ಲಿ ಅನೇಕ ಗಂಗಾ ನದಿಗಳು ಹರಿಯುತ್ತಿರುವುದನ್ನು ಯಾರಾದರೂ ಕಾಣಬಹುದು. ಆ ನದಿಗಳೆಂದರೆ, ಕಾಯಕ ಗಂಗಾ, ಜ್ಞಾನಗಂಗಾ, ಚಿಂತನಗಂಗಾ ಮತ್ತು ಕಾರುಣ್ಯ ಗಂಗಾ" ಎಂದಿದ್ದಾರೆ. ಈ ಮಾತು ಶ್ರೀ ಸಿದ್ಧಗಂಗಾ ಕ್ಷೇತ್ರದ ಬಗೆಗೆ ಮಾತ್ರವಲ್ಲ ಪೂಜ್ಯ ಸಿದ್ಧಗಂಗಾ ಶ್ರೀಗಳನ್ನು ಕುರಿತಂತೆಯೂ ಹೇಳಬೇಕಾದುದೆಲ್ಲವನ್ನು ಹೇಳುತ್ತದೆ ಎಂದು ನಾನು ಭಾವಿಸಿದ್ದೇನೆ.

ಕೊನೆಯದಾಗಿ, ನನ್ನ ನುಡಿ ಕಾಣಿಕೆ: ಅತ್ತ ಹೆತ್ತ ತಾಯಿ ಯಾರೋ ನಮಗೆ ತಿಳಿಯದು. ಇತ್ತಲಂತೂ ಹೊತ್ತ ತಾಯಿ ಸಿದ್ಧಗಂಗಾ ಶ್ರೀಗಳು. ಅತ್ತ ಆ ಮಕ್ಕಳನ್ನು ಯಾವ ತೊಟ್ಟಿಲಲ್ಲಿ ಇಟ್ಟು ತೂಗಿದರೋ ತಿಳಿಯದು. ಇತ್ತ ಮಾತ್ರ ಆ ಮಕ್ಕಳಿಗೆಲ್ಲ ಸಿದ್ಧಗಂಗಾ ಬೆಟ್ಟದ ತಪ್ಪಲೇ ತೊಟ್ಟಿಲು. ಅತ್ತ ಹೆತ್ತ ತಾಯಿ ಯಾವ ತುತ್ತು



ಉಣಿಸಿದರೋ ನಮಗೆ ತಿಳಿಯದು. ಇತ್ತ ಮಾತ್ರ ಪೂಜ್ಯರು ಬದುಕಿನ ತುತ್ತನ್ನೇ ಎಣಿಸಿದ್ದಾರೆ. ಅತ್ತ ತಮ್ಮ ಮಕ್ಕಳನ್ನು ಹೇಗೆ ನೋಡಿಕೊಂಡರೋ ತಿಳಿಯದು. ಇತ್ತ ಮಾತ್ರ ಪೂಜ್ಯರು ತಮ್ಮ ಕಾರುಣ್ಯದ ರಕ್ಷೆ ಒದಗಿಸಿದ್ದಾರೆ. ಅತ್ತ ಹೆತ್ತವರಿಗೆ ಮಕ್ಕಳೇ ಭಾರವಾಗಿರಬಹುದು. ಇತ್ತ ಸಾವಿರ ಸಾವಿರ ಮಕ್ಕಳು ಬಂದರೂ ಪೂಜ್ಯರಿಗೆ ಭಾರವೆನಿಸಲಿಲ್ಲ. ಅತ್ತ ಹೆತ್ತವರಿಗೆ ಬಾಳೆಲ್ಲ ಸಾಕಾಗಿ ಜೀವಿಸುವುದೆ ಶಿಕ್ಷೆ; ಇತ್ತ ಆ ಮಕ್ಕಳ ಬಾಳಿಗೊಂದು ಬೆಳಕು ತೋರುವ ರಕ್ಷೆ!

ನಿಸರ್ಗ ಸುಂದರ ಪರಿಸರದಲ್ಲಿರುವ ಸಿದ್ಧಗಂಗಾ ಶ್ರೀಕ್ಷೇತ್ರ ನಮ್ಮ ನಾಡಿನ ಒಂದು ಪವಿತ್ರ ಮತ್ತು ಪ್ರತಿಷ್ಠಿತ ಧಾರ್ಮಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಕೇಂದ್ರವಾಗಿದೆ. ನಿಜವಾದ ಅರ್ಥದಲ್ಲಿ ಲೋಕಸೇವೆಯ ಪುಣ್ಯಕ್ಷೇತ್ರವಾಗಿದೆ. ಈ ಕ್ಷೇತ್ರದ ಆತ್ಮದಂತಿರುವ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಕೃಪಾಶೀರ್ವಾದ ನಮ್ಮೆಲ್ಲರ ಮೇಲೆ ಸದಾ ಇರಲಿ.

(ದಿನಾಂಕ ೨೪.೫.೨೦೨೨ ರಂದು ಭದ್ರಾವತಿಯಲ್ಲಿ ಏರ್ಪಡಿಸಿದ್ದ ಪೂಜ್ಯ ಶ್ರೀ ಸಿದ್ಧಗಂಗಾ ಶಿವಕುಮಾರ ಮಹಾಸ್ವಾಮಿಗಳವರ ೧೧೫ನೇ ಜಯಂತಿ ಗುರುವಂದನ ಸಮಾರಂಭದಲ್ಲಿ ಮಾಡಿದ ನುಡಿನಮನ).

# ಅಭಿನವ ಬಸವ

ಸಿದ್ಧಗಂಗೆಯನು ವಿದ್ಯಾಕಾಶಿಯಾಗಿಸಿದ ಕುಲಪತಿ
ಮಹರ್ಷಿ ಶಿವಯೋಗಿ ಶಿವಕುಮಾರೇಶ

ದೀನದಲಿತರಿಗೆ ಅರಿವಿನ ದೀಕ್ಷೆ ನೀಡಿ
ತಲೆಯೆತ್ತಿ ನಿಲ್ಲಿಸಿದಾತ ಶಿವಕುಮಾರೇಶ

ಸಂಸ್ಕೃತ ಶಾಲೆ ಪ್ರಾರಂಭಿಸಿ ಉಪೇಕ್ಷಿತರಿಗೆ ಪ್ರವೇಶ ನೀಡಿ
ಜಾತ್ಯಾತೀತತೆಯ ಪಾಲಿಸಿದಾತ ಶಿವಕುಮಾರೇಶ

ಗ್ರಾಮೀಣರಿಗೆ ಗಗನ ಕುಸುಮವಾಗಿದ್ದ ಸಾಕ್ಷರತೆಯನು ಗ್ರಾಮಾಂತರ
ಪ್ರೌಢಶಾಲೆ ತೆರೆದು ಸಾಮಾಜೀಕರಣಗೊಳಿಸಿದಾತ ಶಿವಕುಮಾರೇಶ

ಸರ್ವರನು ಬಾಚಿ ತಬ್ಬಿಕೊಂಡು ಸಂತೈಸಿ
ಭಾವೈಕ್ಯತೆಯ ಮಂತ್ರ ಪಠಿಸಿದಾತ ಶಿವಕುಮಾರೇಶ

ತ್ರಿಕಾಲ ತ್ರಿವಿಧ ನಿತ್ಯ ದಾಸೋಹದಿ
ಶ್ರೀಮಠವ ಅಕ್ಷಯ ಪಾತ್ರೆಯಾಗಿಸಿದ ಶಿವಕುಮಾರೇಶ

ಮುಗ್ಧಭಕ್ತರಲಿ ಅಂತ್ರತಂತ್ರದಿ
ಆತ್ಮಸ್ಥೈರ್ಯ ತುಂಬಿದಾತ ಶಿವಕುಮಾರೇಶ

ಬೇಡಿಬಂದವರಿಗೆ ಅರಿವು ಅಕ್ಷರ ಅನ್ನದ
ಆಶ್ರಯ ನೀಡಿದಾತ ಶಿವಕುಮಾರೇಶ

ಸಾಮೂಹಿಕ ಪ್ರಾರ್ಥನೆಯಲಿ ಮಹಾದೇವನ ಕಾಣುತ
ಏಕತಾಭಾವನೆಯ ಮೂಡಿಸಿದಾತ ಶಿವಕುಮಾರೇಶ

ಶರಣಧರ್ಮದ ಮಾರ್ಗದರ್ಶನ ಮಾಡಿ
ಜಗದ ದಾಖಲೆಯ ಪೀಠಾಧಿಪತಿಯಾದ ಶಿವಕುಮಾರೇಶ

ದಣಿವರಿಯದ ಸೇವಾಧುರಂಧರನಾಗಿ
ಸಿದ್ಧಗಂಗೆಯನು ಕೈಲಾಸವಾಗಿಸಿದ ಶಿವಕುಮಾರೇಶ

ನಿಶ್ಶಬ್ಧ ಸೇವೆಯನು ಸಿದ್ಧಗಂಗೆಯಲಿ
ಗದ್ದಿಗೆಗೇರಿಸಿ ನಿಸ್ವಾರ್ಥದ ಪಾಠ ಕಲಿಸಿದಾತ ಶಿವಕುಮಾರೇಶ

ನೈತಿಕತೆಯ ಮೇರುಶಿಖರವಾಗಿ
ಸನಾತನ ಧರ್ಮದ ಪ್ರದೀಪನಾದಾತ ಶಿವಕುಮಾರೇಶ

ಬಸವ ಜಯಂತಿಯನು ಸಂಚಾರಿ ವಿಶ್ವವಿದ್ಯಾಲಯವಾಗಿಸಿ
ಗ್ರಾಮ ಗ್ರಾಮಗಳಲಿ ಜ್ಞಾನ ಜ್ಯೋತಿ ಬೆಳಗಿಸಿದಾತ ಶಿವಕುಮಾರೇಶ

ಸಿದ್ಧಗಂಗಾ ಮಾಸಪತ್ರಿಕೆಯ ಪ್ರಾರಂಭಿಸಿ
ಸರ್ವರಿಗೂ ಓದುವ ಬರೆಯುವ ಪ್ರವೃತ್ತಿ ಬೆಳೆಸಿದಾತ ಶಿವಕುಮಾರೇಶ

ಅನ್ನದಾತರಿಗೆ ಕೃಷಿ ಕೈಗಾರಿಕೆ ವಸ್ತುಪ್ರದರ್ಶನದಿ ಆಧುನಿಕ
ಜಾಗತಿಕ ಸವಾಲುಗಳ ದರ್ಶನವ ಮಾಡಿಸಿದಾತ ಶಿವಕುಮಾರೇಶ

ಪೂರ್ವ ಪ್ರಾಥಮಿಕದಿಂದ ಸ್ನಾತಕೋತ್ತರಾರ್ಥಿ ಪಾಮರರಿಂದ
ಪಂಡಿತೋತ್ತಮ ಪಥಿಕರಿಗೆ ಆಶ್ರಯದಾತ ಶಿವಕುಮಾರೇಶ

ದಿನಕರನು ನಾಚಿಸುವ ಸಮಯಪಾಲಕನಾಗಿ ತೆರೆದ ಪುಸ್ತಕದಿ
ದಿನಚರಿಗೆ ಮಾದರಿಯದಾತ ಶಿವಕುಮಾರೇಶ

ಏಕಾಂತಪೂಜೆಯ ಫಲ ಲೋಕಾಂತಗೊಳಿಸಿ
ಉರಿ ಉಂಡ ಕರ್ಪೂರವಾದ ಶಿವಕುಮಾರೇಶ

ಸಿದ್ಧಲಿಂಗಯತಿಗಳ ಅಟವೀಶ್ರೀಗಳ ಉದ್ದಾನೇಶನನುಸರಿಸಿ
ಸಿದ್ಧಲಿಂಗಶ್ರೀಗಳಿಗೆ ಕಾರುಣ್ಯ ಕಣಿಸಿದಾತ ಶಿವಕುಮಾರೇಶ

ಬುದ್ಧನ ಜೀವಕಾರುಣ್ಯದ ಮೂರ್ತರೂಪವಾದ
'ಅಭಿನವ ಬಸವೇಶ' 'ಬಸವೇಶ್ವರರ ಪ್ರತಿರೂಪ' ಶಿವಕುಮಾರೇಶ

ಕ್ಷಣಕ್ಷಣವೂ ಮಿಡಿದಿದೆ ನೆಗಳೂರು ಮಹಾಲಿಂಗೇಶನ ಮನ
ಶ್ರೀಕ್ಷೇತ್ರ ದರುಶನಕೆ ಶಿವಕುಮಾರೇಶನ ಕೃಪಾಕಟಾಕ್ಷಕೆ ಶಿವಕುಮಾರೇಶ

ಸಿದ್ಧಗಂಗೆಯ ಶಕುತಿ ಕನ್ನಡಿಯಲಿಡಗಿಸಿದಾತ ನೆಲಮಂಗಲ ನೆಗಳೂರೇಶ
ಸಿದ್ಧಲಿಂಗಶ್ರೀಗಳಿಗೆ ಕೀರುತಿ ದಿಗ್ದರ್ಶಗಳಿಗಾವರಿಸಲು ಕೃಪೆದೋರು
ಶಿವಕುಮಾರೇಶ

– ಎಂ.ವಿ. ನೆಗಳೂರ, ನೆಲಮಂಗಲ

## ನೆನಪಿನಂಗಳದಿಂದ

# ನಾನೂ ಸಂಸ್ಕೃತವನ್ನು ಓದಿದೆ

– ಕೋ.ರಂ. ಬಸವರಾಜು *

ನಾನು ಶ್ರೀ ಸಿದ್ಧಗಂಗಾ ಮಠಕ್ಕೆ ಸೇರುವ ಹೊತ್ತಿಗೆ ಮಠದ ಪ್ರತಿಯೊಬ್ಬ ವಿದ್ಯಾರ್ಥಿಗೂ ಕಡ್ಡಾಯವಾಗಿ ಸಂಸ್ಕೃತವನ್ನು
ಕಲಿಯಬೇಕೆಂಬ ಗುರುಕುಲದ ನಿಯಮ ಜಾರಿಗೆ ಬಂದು ಎಷ್ಟೋ ವರ್ಷಗಳಾಗಿದ್ದವು. ಸರ್ವಮತಸ್ಥರಿಗೂ ಸಂಸ್ಕೃತ ಕಲಿಯುವ
ಅವಕಾಶವನ್ನು ಕಲ್ಪಿಸಿಕೊಟ್ಟ ಉದ್ದಾನಶ್ರೀಗಳು 'ಪ್ರತಿಯೊಬ್ಬ ವಿದ್ಯಾರ್ಥಿಯೂ ಸಂಸ್ಕೃತದಲ್ಲಿ ಮಾತನಾಡಬೇಕು. ಇಲ್ಲದಿದ್ದರೆ
ಅರ್ಧ ಆಣೆ ದಂಡ ಹಾಕಲಾಗುವುದು' ಎಂಬ ಸ್ವಹಸ್ತ ಲಿಖಿತ ಠರಾವು ಹೊರಡಿಸಿದ್ದನ್ನು ಕೇಳಿದ್ದೆ (ಆ ಠರಾವು ಇತ್ತೀಚೆಗೆ
ಲಭ್ಯವಾಗಿದೆ) ದಂಡ ಹಾಕುತ್ತಿದ್ದರೋ ಇಲ್ಲವೋ ಅದು ಮುಖ್ಯವಲ್ಲ. ಅವರ ಸಂಸ್ಕೃತ ಪ್ರೇಮ ಹಾಗೂ ವಿದ್ಯಾರ್ಥಿಗಳು
ಕಲಿಯಬೇಕೆಂಬ ಕಳಕಳಿ ಬಹಳ ಮುಖ್ಯ.

ನಾನು ಸಂಸ್ಕೃತ ಪ್ರಥಮಾ ಒಂದನೆಯ ತರಗತಿಗೆ ಸೇರಿದ್ದು ಪ್ರೌಢಶಾಲೆ ಒಂದನೆಯ ತರಗತಿಯಲ್ಲಿದ್ದಾಗ. ಅದು ಸಂಸ್ಕೃತ
ಕಾಲೇಜಿನ ಉತ್ಸರ್ಪಿಣೀಕಾಲ. ೧೯೧೭ರಲ್ಲಿ ಪೂಜ್ಯ ಉದ್ದಾನಶ್ರೀಗಳಿಂದ ಸ್ಥಾಪಿತವಾದ ಪಾಠಶಾಲೆ ೧೯೩೭ರಲ್ಲಿ ಪರಮಪೂಜ್ಯ
ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಕ್ರತುಶಕ್ತಿಯಿಂದ 'ಎ' ಗ್ರೇಡ್ ಕಾಲೇಜಾಗಿ ಉನ್ನತಿಗೊಂಡ ಮೇಲೆ ಅದಕ್ಕೊಂದು
ರಾಷ್ಟ್ರಮಟ್ಟದ ಪ್ರತಿಷ್ಠೆ ಮನ್ನಣೆಗಳು ಲಭ್ಯವಾದವು. ಅದಕ್ಕೆ ಕಾರಣ ರಾಷ್ಟ್ರಮಟ್ಟದ ವಿದ್ವಾಂಸರನ್ನು ನೇಮಕಮಾಡಿಕೊಂಡದ್ದು
ಮತ್ತು ಪ್ರತಿಭಾವಂತ ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದುದು. ಆವೊತ್ತಿನ ದಿನಗಳಲ್ಲಿ ಶ್ರೀಮಠದ ತುಂಬೆಲ್ಲಾ ಸಂಸ್ಕೃತದ್ದೇ
ವಾತಾವರಣ. ಮಠದ ಆವರಣದಲ್ಲಿ ಎಲ್ಲೆಲ್ಲೂ ಸಂಸ್ಕೃತ ಶ್ಲೋಕಪಠಣದ ಹಾಗೂ ವೇದಘೋಷದ ಅನುರಣನವೇ. ತರಗತಿಗೆ
ಹೋಗುವಾಗ, ಶಾಲೆ ಬಿಟ್ಟಾಗ, ಊಟಕ್ಕೆ ಹೋಗುವಾಗ ಅಷ್ಟೇ ಏಕೆ ತಿರುಗಾಡುವಾಗ ಎಲ್ಲಾ ವಿದ್ಯಾರ್ಥಿಗಳ ನಾಲಗೆಯ ಮೇಲೂ
ಕೋಶ, ಶಬ್ದ, ಸುಭಾಷಿತಗಳ ನರ್ತನವೇ ನರ್ತನ. ಕೆಲವರು ಅಸಾಧಾರಣ ವಿದ್ಯಾರ್ಥಿಗಳಿದ್ದರು. ಸಾದೃಶ್ಯ ಪದವಾಕ್ಯ ಪ್ರಯೋಗ
ಪರಿಣತರು. ಅಧ್ಯಾಪಕರು 'ಅಮರಾ ನಿರ್ಜರಾ' ಮುಂತಾಗಿ ಕೋಶ ಹೇಳಿಕೊಟ್ಟರೆ ಅವರು 'ಮೇಷ್ಟ್ರಿಗೆ ಜ್ವರ ಬರಾ' ಎಂದು
ಸೇರಿಸಿ ಗುಂಪಿನಲ್ಲಿ ಗೊಣಗುತ್ತಿದ್ದರು. ಮೇಷ್ಟ್ರ 'ಶಂಭುಃ ಶಂಭೂ ಶಂಭವಃ' ಎಂದು ಹೇಳಿಕೊಟ್ಟರೆ ಅದರ ಸಾದೃಶ್ಯದ ಮೇಲೆ
'ಫ್ರೆಂಡುಃ ಪ್ರೆಂಡೂ ಫ್ರೆಂಡವಃ..' ಎಂದು ಆ ಶಬ್ದವನ್ನು ಶಂಭು ಶಬ್ದದಂತೆ ಎಲ್ಲಾ ವಿಭಕ್ತಿಯಲ್ಲಿಯೂ ನಡೆಸುತ್ತಿದ್ದರು. ಇನ್ನೊಬ್ಬ
ವಿದ್ಯಾರ್ಥಿಯಿದ್ದ. ಅವನು ಅಸಾಧ್ಯಮೂರ್ತಿ. ಮೆಣಸು ಮುತ್ತು ಬೆರೆಸಿದಂತೆ ಕನ್ನಡ ಸಂಸ್ಕೃತ ಬೆರೆಸಿ ಹೇಳುವುದರಲ್ಲಿ ಜಾಣ.
ಊಟಕ್ಕೆ ಸಾಲಾಗಿ ಕುಳಿತಾಗ ಸಾರನ್ನು ಬಡಿಸುವವನೊಬ್ಬ ಬಕೇಟ್‌ನಿಂದ ಸಾರು ಬಡಿಸುತ್ತಿದ್ದ. ಇವನು ಬಕೇಟಿನ ತಳಭಾಗದಿಂದ
ತೋಡಿ ಸಾರನ್ನು ಹಾಕು ಎನ್ನುತ್ತಿದ್ದ. ಅದಕ್ಕೆ ಬಡಿಸುವವನು ತಳದಲ್ಲಿ ಗಪ್ಪ(ಗಟ್ಟಿ)ಯಿದೆ ಎನ್ನುತ್ತಿದ್ದ. ಆಗ ಆ ಸಂಸ್ಕೃತ ಪ್ರೇಮಿ
'ಗಪ್ಪೇನ ಕಿಂ ನಷ್ಟಃ? ಕಾಳಿರ್ಭವತಿ' ಸಂಸ್ಕೃತದ ವಾತಾವರಣ ಶ್ರೀಮಠದ ತುಂಬಾ ನಿರ್ಮಾಣವಾಗಿತ್ತು.

ಪರಮಪೂಜ್ಯ ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳೂ ಅವರ ಗುರುಗಳಂತೆ ಸಂಸ್ಕೃತ ತಜ್ಞರೂ ಸಂಸ್ಕೃತ
ಪ್ರೇಮಿಗಳೂ ಆಗಿದ್ದರು. ತಮ್ಮ ಗುರುಗಳಂತೆ ವಿದ್ಯಾರ್ಥಿಗಳಿಗೆ ಸಂಸ್ಕೃತಾಭ್ಯಾಸವನ್ನು ಕಡ್ಡಾಯಗೊಳಿಸಿದ್ದರು. ಕಾವ್ಯ ತರಗತಿಗಳಿಗೆ
ಕಾಳಿದಾಸನ ರಘುವಂಶ ಕುಮಾರಸಂಭವದಂತಹ ಕಾವ್ಯಭಾಗವನ್ನು ಸ್ವಯಂ ಬೋಧಿಸುತ್ತಿದ್ದರು. ಸಂಸ್ಕೃತದ ಸಭೆ
ಸಮ್ಮೇಳನಗಳಲ್ಲಿ ಅಧಿಕಾರವಾಣಿಯಿಂದ ಮಾತನಾಡುತ್ತಿದ್ದರು. ಸರ್ಕಾರದ ಸಂಸ್ಕೃತ ಶಿಕ್ಷಣ ಸಮಿತಿಯ ಸದಸ್ಯರೂ ಆಗಿದ್ದರು.

ನಾನು ಸಂಸ್ಕೃತವನ್ನು ಕಲಿಯುವ ಕಾಲಕ್ಕೆ ಕಾಲೇಜಿನಲ್ಲಿ ರಾಷ್ಟ್ರಮಟ್ಟದ ವಿದ್ಯಾಂಸರಾದ ಶ್ರೀ ವೈ. ವಿಶ್ವನಾಥಶಾಸ್ತ್ರಿ, ಶ್ರೀ ಎ.
ವಾಸುದೇವಾಚಾರ್, ಶ್ರೀಪತಿಶರ್ಮ, ಶ್ರೀ ಶ್ರೀನಿವಾಸ್ಯೆಯ್ಯಂಗಾರ್, ಸಂಪತ್ತ್ಯಂಗಾರ್, ಶ್ರೀ ಎಂ.ಎನ್. ಲಕ್ಷ್ಮೀನರಸಿಂಹಭಟ್ಟ, ಶ್ರೀ
ಸಿ.ಎಂ. ರುದ್ರಾರಾಧ್ಯಶರ್ಮ, ಶ್ರೀ ಬಿ. ಗಂಗಪ್ಪ ಮುಂತಾದ ವಿದ್ವತ್ತಲ್ಲಜರಿದ್ದರು. ಅದರಲ್ಲಿಯೂ ಬ್ರಾಹ್ಮಣ ವಿದ್ಯಾಂಸರು
ಪ್ರತಿಯೊಬ್ಬರೂ ನಾಲ್ಕಾರು ಶಾಸ್ತ್ರಗಳಲ್ಲಿ ಘನಪಾಂಡಿತ್ಯ ಪಡೆದವರಾಗಿದ್ದರು. ಆಗ ಕಾಲೇಜಿನಲ್ಲಿ ಅಲಂಕಾರಶಾಸ್ತ್ರ, ವ್ಯಾಕರಣಶಾಸ್ತ್ರ,
ತರ್ಕಶಾಸ್ತ್ರ ವಿಭಾಗವೆಂಬ ಅಧ್ಯಯನದ ವಿಷಯ ವಿಭಾಗಗಳಿದ್ದವು. ನಂತರ ಶಕ್ತಿವಿಶಿಷ್ಟಾದ್ವೈತಶಾಸ್ತ್ರ ಪ್ರಾರಂಭವಾಯಿತು.
ಯಾರಿಗೆ ಯಾವ ಶಾಸ್ತ್ರ ವಿಷಯ ಕೊಟ್ಟರೂ ಅಧ್ಯಾಪನ ಮಾಡುತ್ತಿದ್ದರು. ನಾನು ಸಂಸ್ಕೃತ ಕಲಿಯಲು ಪ್ರಾರಂಭಿಸುವ ಹೊತ್ತಿಗೆ

* ನಿವೃತ್ತ ಪ್ರಾಧ್ಯಾಪಕರು, 'ಮಧುಕೇಶ್ವರ ನಿಲಯ, ಶಿನೇ ಕ್ರಾಸ್, ಎಸ್.ಐ.ಟಿ. ಬಡಾವಣೆ, ತುಮಕೂರು.



ಈ ಕಾಲೇಜಿನಲ್ಲಿ ಕಲಿತು ಮಹಾನ್ ಸಾಧಕರಾಗಿ ಶ್ರೀಮಠದ ಕೀರ್ತಿಪತಾಕೆಯನ್ನು ಹಲವಾರು ಮಂದಿ ಹಾರಿಸಿದ್ದರು. ಆಸ್ಥಾನ ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯ. ಡಾ. ಜಿ. ಮರುಳಸಿದ್ಧಯ್ಯ, ಡಾ. ಟಿ.ಜಿ. ಸಿದ್ಧಪ್ಪಾರಾಧ್ಯ, ವಿದ್ವಾನ್ ಬಿ. ಗಂಗಪ್ಪ, ಹೆಚ್.ಕೆ. ಸಿದ್ಧಗಂಗಯ್ಯ, ಕ್ಯಾತ್ಸಂದ್ರದ ಲಕ್ಷ್ಮೀನಾರಾಯಣಭಟ್ಟ, ಬಿ. ರಾಜಶೇಖರಯ್ಯ ಮುಂತಾದವರನ್ನು ಹೆಸರಿಸಬಹುದು.

ಪರಮಪೂಜ್ಯ ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಸಂಸ್ಕೃತ ವಿದ್ವಾಂಸರನ್ನು ಕಂಡರೆ ವಿಶೇಷವಾದ ಗೌರವ. ಆವರವರ ಸಂಪ್ರದಾಯ ಆಚಾರ ವಿಚಾರಗಳನ್ನು ಗೌರವಿಸುತ್ತಿದ್ದರು. ವೇತನದ ಜೊತೆಗೆ ಪಡಿಪದಾರ್ಥಗಳನ್ನು ಮನೆಗಳಿಗೆ ಕಳುಹಿಸಿ ಕೊಡುತ್ತಿದ್ದರು. ಹಬ್ಬ ಹರಿದಿನಗಳಲ್ಲಿ ಬೇಳೆ ತುಪ್ಪಗಳನ್ನು ಕೊಡುತ್ತಿದ್ದರು. ದ್ವೈತ ಅದ್ವೈತ ವಿಶಿಷ್ಟಾದ್ವೈತಮತಸ್ಥ ಎಲ್ಲಾ ವಿದ್ವಾಂಸರೂ ಪರಮಪೂಜ್ಯರನ್ನು ಅಷ್ಟೇ ಗೌರವ ಭಕ್ತಿಗಳನ್ನು ಇಟ್ಟುಕೊಂಡಿದ್ದರು. ಪರಮಪೂಜ್ಯರಿಗೆ ವೇದಾಂತಾದಿ ಶಾಸ್ತ್ರಗಳಲ್ಲಿ ಸಂಶಯ ಬಂದಾಗ ವಿದ್ವಾಂಸರಿಗೆ ಹೇಳಿ ಕಳುಹಿಸುತ್ತಿದ್ದರು. ಆಗ ಬಂದು ನಮಸ್ಕಾರ ಮಾಡಿ ಸಂಶಯುವನ್ನು ಬಗೆಹರಿಸುತ್ತಿದ್ದರು. ಪೂಜ್ಯರೂ ಗೌರವದಿಂದ ಅವರನ್ನು ಕೂರಿಸಿಕೊಂಡು ಕೇಳುತ್ತಿದ್ದರು. ಹೀಗೆ ಅವರು ಪೂಜ್ಯರ ವಿಷಯದಲ್ಲಿ ಗೌರವಾದರಗಳನ್ನು ಇಟ್ಟುಕೊಂಡಿದ್ದರು. ಇದಕ್ಕೊಂದು ಸಂದರ್ಭವನ್ನು ಉದಾಹರಿಸಬಯಸುತ್ತೇನೆ.

ವೈ. ವಿಶ್ವನಾಥಶಾಸ್ತ್ರಿಗಳು ವಿದ್ವತ್ತಲ್ಲಜರು. ಒಂದು ರೀತಿಯಲ್ಲಿ ಪುರುಷ ಸರಸ್ವತಿ. ಎಲ್ಲಾ ಶಾಸ್ತ್ರಗ್ರಂಥಗಳ ಪಂಕ್ತಿಪಂಕ್ತಿಯೂ ಅವರಿಗೆ ಕಂಠಸ್ಥ. ಇಂಥ ವಿದ್ವಾಂಸರ ಭಕ್ತಿಯ ನುಡಿಗಳನ್ನು ಕೇಳಿರಿ. 'ನಾನು ಶೃಂಗೇರಿ ಹತ್ತಿರದ ವೈಕುಂಠಪುರದವನು. ವಿದ್ವತ್ ಆದ ಮೇಲೆ ಸ್ನೇಹಿತರ ಸಲಹೆಯಂತೆ ಉದ್ಯೋಗವನ್ನು ಪ್ರಾರ್ಥಿಸಿ ಶ್ರೀ ಸಿದ್ಧಗಂಗಾ ಶ್ರೀಗಳವರಿಗೆ ಪತ್ರವನ್ನು ಬರೆದೆನು. ಅತ್ತ ಒಂದು ವಾರಕ್ಕೆ ಸರಿಯಾಗಿ ಬಹುಷಃ ಅಂದು ಶುಕ್ರವಾರ ಇರಬಹುದು, ಪೂಜ್ಯರು ಬರೆದ ಕಾಗದ ಬಂತು. ತತ್ರಾಪಿ ನಾನು ದೇವರಪೂಜೆಯನ್ನು ಮಾಡುತ್ತಿರುವ ಸಮಯಕ್ಕೆ ಸರಿಯಾಗಿ ಬಂತು. ಪೂಜೆಯ ಮಧ್ಯೆ ನಾನು ಯಾವ ಪತ್ರವನ್ನು ಮುಟ್ಟಿ ನೋಡುತ್ತಿರಲಿಲ್ಲ. ಆದರೆ ಪೂಜ್ಯರ ಪತ್ರವಾದ್ದರಿಂದ ತೆಗೆದು ನೋಡಿದೆ. ನೀವು ಕೂಡಲೇ ಹೊರಟು ಬನ್ನಿ. ನಿಮ್ಮನ್ನು ಸಂಸ್ಕೃತ ಕಾಲೇಜಿಗೆ ಅಧ್ಯಾಪಕರನ್ನಾಗಿ ನೇಮಿಸಿ ಕೊಳ್ಳಲಾಗಿದೆ. ಎಂಬುದಾಗಿ ನಿರೂಪವನ್ನು ಬರೆದಿದ್ದರು. ಆ ಮುನ್ನ ನಾನು ಯಾವತ್ತೂ ಅವರನ್ನು ನೋಡದಿದ್ದರೂ ಅವರ ಶ್ರೀಒಕ್ಕಣೆಯನ್ನು ನೋಡಿಯೇ ಅವರ ಅಪಾರವಾದ ವಾತ್ಸಲ್ಯಾಶ್ರಯವನ್ನು ಪರಿಭಾವಿಸಿ ಕೊಂಡು, ಪೂಜಾ ಸಮಯಕ್ಕೆ ಉದ್ಯೋಗವನ್ನರಿಸಿಕೊಂಡು ಬಂದ ಈ ಪತ್ರವೇ ದೇವರಪ್ರಸಾದವೆಂದು ಭಾವಿಸಿ ಶ್ರೀಮಠಕ್ಕೆ ಬಂದು ಅಧ್ಯಾಪಕ ವೃತ್ತಿಗೆ ಸೇರಿಕೊಂಡೆನು. ಅಂದಿನಿಂದ ಶ್ರೀಗಳವರು ಒಂದೇ ವಿಧವಾದ ಗೌರವ ಮತು ಅನುಕೂಲಗಳನ್ನು ಕಲ್ಪಿಸಿಕೊಟ್ಟು ಕಾಪಾಡುತ್ತಿದ್ದಾರೆ'.

ಈ ಮಾತನ್ನು ಅವರು ಅನೇಕ ಸಂದರ್ಭಗಳಲ್ಲಿ ಕೃತಜ್ಞತೆಯಿಂದ ಹೇಳುತ್ತಿದ್ದರು. ಹಾಗೆ ಹೇಳುವಾಗ ಅವರ ಕಣ್ಣಂಚಿನಲ್ಲಿ ಹನಿಗಳು ಮೂಡಿ ಬರುತ್ತಿದ್ದವು. 'ಕೃತಮುಪಕಾರಂ ಸಾಧವೋ ನ ವಿಸ್ಮರಂತಿ' ಅಲ್ಲವೇ?

ಸಂಸ್ಕೃತ ಭಾಷೆ ಭರತಖಂಡದ ಜೀವವಾಹಿನಿ. ಸಮಸ್ತ ಮಾನವೀಯ ಮೌಲ್ಯಗಳ ಕಣಜ. ನಮ್ಮ ಸನಾತನ ಧರ್ಮಸಂಸ್ಕೃತಿಗಳ ಸುರಗಂಗೆ. ಆದರೆ ಆ ಸುರಗಂಗೆಯ ಪವಿತ್ರೋದಕದ ಪಾನ ಎಲ್ಲಾ ಜನಾಂಗಕ್ಕೂ ಬಹಳ ಕಾಲದವರೆವಿಗೆ ಲಭ್ಯವಿರಲಿಲ್ಲವೆಂಬ ಅಂಶವು ಇತಿಹಾಸಾವಲೋಕಿಗಳ ಬುದ್ಧಿಗೆ ಬಾರದಿರದು. ಅದು ಕೇವಲ ಒಂದು ವರ್ಗದ ಸ್ವತ್ತಾಗಿ ಉಳಿದು ಬಂತು. ಬಹಳ ಕಾಲದವರೆವಿಗೂ ಇತರ ವರ್ಗದ ಸುಲಿಗೆಯ ಸಾಧನವಾಯಿತು. ಅಷ್ಟೇ ಅಲ್ಲ ಅದರ ಅಧ್ಯಯನವಿರಲಿ, ಶ್ರವಣವೂ ಕೂಡ ಮಹಾಪಾಪಕರವೆಂಬ ಟೊಳ್ಳು ಭೀತಿಯ ಕೋಟೆಯನ್ನು ಅದರ ಸುತ್ತ ನಿರ್ಮಿಸಲಾಗಿತ್ತು. ಇಂಥ ಸಮಯದಲ್ಲಿ ಎಲ್ಲ ವರ್ಗವರ್ಣದವರಿಗೂ ಸಂಸ್ಕೃತಾಧ್ಯಯನದ ಮುಕ್ತ ಅವಕಾಶವನ್ನು ಕಲ್ಪಿಸ ಬೇಕೆಂಬುದಾಗಿ ಮೊದಲಿಗೆ ಚಿಂತಿಸಿದವರು ವೀರಶೈವ ಮಠಾಧಿಪತಿಗಳು. ತತ್ರಾಪಿ ಸಮಾಜಸೇವೆಯನ್ನೇ ಮುಖ್ಯಗುರಿಯಾಗಿಟ್ಟುಕೊಂಡಿರುವ ಹಾಗೂ ಸಂಸ್ಕೃತವನ್ನು ವಿಶೇಷವಾಗಿ ಪ್ರೀತಿಸಿ ಪೋಷಿಸುವ ಶ್ರೀ ಸಿದ್ಧಗಂಗಾ ಮಠಾಧಿಪತಿಗಳೇ ಮೊದಲಿಗರು. ಅದರಲ್ಲಿ ಪರಮಪೂಜ್ಯ ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರು ಮಠದ ಪ್ರತಿಯೊಬ್ಬ ವಿದ್ಯಾರ್ಥಿಗೂ ಸಂಸ್ಕೃತವನ್ನು ಕಲಿಯಬೇಕೆಂಬ ಹಂಬಲವುಳ್ಳವರಾಗಿದ್ದರು. ಅವನು ಶಾಸ್ತ್ರಾಧ್ಯಯನ ಮಾಡದಿದ್ದರೂ ಪರವಾಗಿಲ್ಲ,. ನಾಲ್ಕಾರು ಸುಭಾಷಿತಗಳನ್ನು ಕಲಿತರೆ ಸಾಕು. ಅವು ಒಂದಲ್ಲ ಒಂದು ದಿನ ಅವನ ಬಾಳಿಗೆ ಬೆಳಕಾಗುತ್ತವೆ ಎಂದು ಹೇಳುತ್ತಿದ್ದರು. ಅದು ನಾನು ಸಂಸ್ಕೃತವನ್ನು ಕಲಿತಮೇಲೆ ಮನದಟ್ಟಾಯಿತು.







ಲೇಖನ

# ಅರಿದೆಡೆ ಶರಣ ಮರೆದಡೆ ಮಾನವ

– ಪ್ರೊ. ಬಿ.ಆರ್. ಪೋಲಿಸ್ ಪಾಟೀಲ
ಬನಹಟ್ಟಿ, ಬಾಗಲಕೋಟೆ ಜಿಲ್ಲೆ

ಜಗತ್ತಿನ ಮೇಲಿನ ಬಹುತೇಕ ಧರ್ಮಗಳು ಮನುಷ್ಯನನ್ನು 'ತಾನಾರೆಂದು ಅರಿ' ಎಂದು ಕಲಿಸಬಹುದು. ತನ್ನ ತಾನರಿದು ದೇವರ ಸೇವಕನಾಗೆಂದು ಕಲಿಸಬಹುದು. ಅತಿ ಹೆಚ್ಚೆಂದರೆ ದೇವರಾಗೆಂದು ಬೋಧಿಸಬಹುದು. ಜೀವಿ ತನ್ನ ಆಚಾರ-ವಿಚಾರ, ನೇಮ-ನಿಷ್ಠೆ, ಕಾಯಕ-ದಾಸೋಹ ತತ್ತ್ವಗಳನ್ನು ಅರಿತು ಆಚರಿಸಿದರೆ ಪರಮ(ದೈವ)ನಿಗಿಂತ ಅಧಿಕನೆನ್ನಿಸುವ ಶಕ್ತಿವಂತನಾಗಬಲ್ಲ ಎಂದು ತಿಳಿಸುವ ಅಪರೂಪದ ಧರ್ಮ ಎಂದರೆ ಲಿಂಗವಂತ ಧರ್ಮ ಅಥವಾ ಬಸವಧರ್ಮ. ಇದಕ್ಕೆ ಬಸವಣ್ಣನವರ ಈ ಕೆಳಗಿನ ವಚನವೇ ಸಾಕ್ಷಿ.

**ಭಕ್ತನೆನಿಸುವೆನಯ್ಯಾ ಮೆಲ್ಲಮೆಲ್ಲನೆ
ಯುಕ್ತನೆನಿಸುವೆನಯ್ಯಾ ಮೆಲ್ಲಮೆಲ್ಲನೆ
ಸಾರಿ ಸಾರಿ ಶರಣನೆನಿಸುವೆನಯ್ಯಾ ಮೆಲ್ಲಮೆಲ್ಲನೆ
ಎಡಹುಗುಳಿಗಳ ದಾಂಟಿ ಬರಬರ ಲಿಂಗೈಕ್ಯನೆನಿಸುವೆನಯ್ಯಾ
ಕೂಡಲಸಂಗಮದೇವಾ, ನಿಮ್ಮಿಂದಧಿಕನೆನಿಸುವೆನಯ್ಯಾ**

ಲೋಕದ ಮನುಜರೆಲ್ಲಾ ಹುಟ್ಟಿದ ರೀತಿ ಒಂದೇ ಇರಬಹುದು, ಇವರನ್ನೆಲ್ಲ ಮಾಡಿದ ಮಣ್ಣು ಅಥವಾ ಧಾತು ಒಂದೇ ಆಗಿರಬಹುದು. ಆದರೆ ಪಡೆವ ಸಂಸ್ಕಾರ, ಬದುಕುವ ಪರಿಸರ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಈ ಭಿನ್ನತೆಯೇ ಭಿನ್ನಮತಕ್ಕೆ, ಭಿನ್ನಮನಕ್ಕೆ ಕಾರಣವಾಗುತ್ತದೆ. ಇದರ ಉಪಶಮನದ ಉಪಾಯವೂ ಇದೆ. ಶರಣರ ವಚನಗಳಲ್ಲಿ ಬಸವಣ್ಣನವರ ಇನ್ನೊಂದು ವಚನ :

**ಉಂಬ ಬಟ್ಟಲು ಬೇರೆ ಕಂಚಲ್ಲ, ನೋಡುವ ದರ್ಪಣ ಬೇರೆ ಕಂಚಲ್ಲ
ಭಾಂಡ ಒಂದೇ, ಭಾಜನ ಒಂದೇ, ಬೆಳಗೆ ಕನ್ನಡಿಯೆನಿಸಿತ್ತಯ್ಯಾ!
ಅರಿದಡೆ ಶರಣ, ಮರೆದಡೆ ಮಾನವ
ಮರೆಯದೆ ಪೂಜಿಸುವ ನಮ್ಮ ಕೂಡಲಸಂಗಮ ದೇವನ.**

ಹನ್ನೆರಡನೆಯ ಶತಮಾನದಲ್ಲಿ ಉಂಬ ಬಟ್ಟಲಿಗೆ (ತಟ್ಟೆಗೆ) ಹಾಗೂ ನೋಡುವ ದರ್ಪಣಕ್ಕೆ (ಕನ್ನಡಿಗೆ) ಬಳಸುವ ಲೋಹ ಒಂದೇ (ಕಂಚು) ಆಗಿರುತ್ತಿತ್ತು. ಉಣ್ಣುವ ತಟ್ಟೆ ಅಥವಾ ಗಂಗಾಳಕ್ಕೆ ತಗಲುವ ಉಪ್ಪು-ಖಾರ, ಹುಳಿ, ಕಿಲುಬಿಗೆ ಕಾರಣವಾಗಿ ಹಸಿರಾಗಿ ಅಂದಗೆಟ್ಟರೆ ಅದನ್ನು ನೋಡಿದರೆ (ದರ್ಪಣ) ನಿತ್ಯವೂ ಬೆಳಗಿಸಿಕೊಳ್ಳುತ್ತಾ ಹೋಗಿ ಮುಖ ಸ್ಪಷ್ಟವಾಗಿ ಕಾಣಿಸುತ್ತದೆ. 'ಬೆಳಗೆ ಕನ್ನಡಿಯೆನಿಸಿತ್ತು' ಎಂದರೆ ಆಯಾ ವ್ಯಕ್ತಿಗೆ ದೊರಕುವ ಸಂಸ್ಕಾರ, ಈ ಸಂಸ್ಕೃತಿಯ ಬೆಳಗುವಕೆ, ಅದೇ ಕಂಚನ್ನು ಕನ್ನಡಿಯಾಗಿಸಬಲ್ಲುದು ಎಂಬ ಸತ್ಯವನ್ನು ಮನದಟ್ಟು ಮಾಡುತ್ತದೆ. ಪಶುತ್ವದಿಂದೊಡಗೂಡಿಯೇ ಭುವಿಗೆ (ಮರ್ತ್ಯಕ್ಕೆ) ಬಂದ ಮಾನವ ಶರಣನಾಗುವುದು, ದೇವನಾಗುವುದು, ಅವನಿಗಿಂತಧಿಕನಾಗುವುದು ಈ ಸಂಸ್ಕಾರದಿಂದ ಮಾತ್ರ

ವಿದ್ವಾಂಸರೆಂಬ ಕೆಲ ಅಣ್ಣಗಳು 'ಮರೆದಡೆ ಮಾನವ' ಎಂಬುದು ಪಾಠಾಂತರವಾಗಿರಬೇಕು. 'ಅರಿದಡೆ ಶರಣ, ಮರೆದಡೆ ಮರಣ' ಎಂಬುದೇ ಸರಿ ಎಂದು ವಾದಿಸುತ್ತಿರುವುದನ್ನು ಕೇಳಿದ್ದೇನೆ. ಇದು ಖಂಡಿತ ಪಾಠಾಂತರ ಅಲ್ಲ ಎಂಬುದು ಇದೇ ವಚನದ ಮೊದಲಿನ ಎರಡು ಸಾಲುಗಳನ್ನು ಸರಿಯಾಗಿ ಅರ್ಥಮಾಡಿಕೊಂಡರೆ ಸ್ಪಷ್ಟವಾಗುತ್ತದೆ. ಧರ್ಮ ಅಥವಾ ಆದರ್ಶ ಯಾವುದೇ ಇರಲಿ, ಅದರ ಪರಮೋಚ್ಚ ಗುರಿ ಕೇವಲ ಮಾನವನನ್ನಾಗಿಸುವುದಲ್ಲ; ಮಾನವ ಶ್ರೇಷ್ಠ (ಶರಣ) ನನ್ನಾಗಿಸುವುದು. ಇದನ್ನೇ ಬಸವಣ್ಣನವರು 'ಬೆಳಗೆ ಕನ್ನಡಿಯೆನಿಸಿತ್ತು' ಎಂದು ಕರೆದಿರುವುದು, ಮನುಷ್ಯ ಪ್ರಾಣಿ







ತನ್ನ ಅಹಂ-ಮಮಗಳನ್ನು ಅಳಿದು ತನ್ನನ್ನು ಉಜ್ಜಿ ಶುದ್ಧಗೊಳಿಸಿಕೊಳ್ಳಬೇಕು ಎನ್ನುವ ಬಸವಣ್ಣ ಇದನ್ನು ಮಾಡುವ ಪರಿಯನ್ನು ಹೀಗೆ ಹೇಳುತ್ತಾರೆ :

**ಐದು ಮಾನವ ಕುಟ್ಟಿ ಒಂದು ಮಾನವ ಮಾಡು ಕಂಡಾ
ಮದವಳಿಗೆ !
ಇದು ನಮ್ಮ ಬಾಳುವೆ ಮದವಳಿಗೆ !
ಇದು ನಮ್ಮ ವಿಸ್ತಾರ ಮದವಳಿಗೆ !
ಮದವಳಿದು ನಿಜವುಳಿದ ಬಳಿಕ ಅದು ಸತ್ಯ ಕಾಣಾ,
ಕೂಡಲಸಂಗಮದೇವಾ.**

ಪಂಚೇಂದ್ರಿಯಗಳ ದಾಸನಾದ ಮನುಷ್ಯ ಪ್ರಾಣಿ ಇವುಗಳಿಂದ ಪ್ರೇರಿತವಾಗುವ ವಿಷಯ ವಿಕಾರಗಳನ್ನು, ಅಷ್ಟಮದ, ಪಂಚ ಮಹಾಪಾತಕಗಳನ್ನು ಅಳಿದು ನಿಚ್ಚಿ ನಿರಾಳ ಭಕ್ತಿ ಉಳಿದಾಗ ಮಾತ್ರ ಸತ್ಯದ ಸಾಕ್ಷಾತ್ಕಾರ ವಾಗುತ್ತದೆ. ಮನುಜನ ಭ್ರಮೆ ಇಳಿದು (ಅಳಿದು), ಮಾನವ ಶ್ರೇಷ್ಠ ಶರಣನಾಗಿ, ಇನ್ನೂ ಮುಂದೆ ಸಾಗಿ ಐಕ್ಯ (ಬಯಲು) ಎನ್ನಿಸಿಕೊಳ್ಳಬಲ್ಲ ಎಂಬುದು ಈ ವಚನದ ತಾತ್ಪರ್ಯ. ಒಮ್ಮೆ ಶರಣನಾದವ, ಐಕ್ಯಸ್ಥಲ ತಲುಪಿದವ ಮತ್ತೆ ಮನುಜನಾಗಲಾರ, ಹಾಗಾಗಬಾರದು ಕೂಡ ಎಂದು ಬಸವಣ್ಣನವರೇ ಹೇಳುತ್ತಾರೆ ಈ ವಚನದಲ್ಲಿ –

**ಮಣ್ಣ ಮಡಕೆ ಮಣ್ಣಾಗದು ಕ್ರಿಯಳಿದು
ಬೆಣ್ಣೆ ಕರಗಿ ತುಪ್ಪವಾಗಿ ಮರಳಿ ಬೆಣ್ಣೆಯಾಗದು ಕ್ರೀಯಳಿದು
ಹೊನ್ನು ಕಬ್ಬುನವಾಗದು ಕ್ರೀಯಳಿದು
ಮುತ್ತು ನೀರಲ್ಲಿ ಹುಟ್ಟಿ ಮತ್ತೆ ನೀರಾಗದು ಕ್ರೀಯಳಿದು
ಕೂಡಲಸಂಗನ ಶರಣನಾಗಿ
ಮರಳಿ ಮಾನವನಾಗನು ಕ್ರೀಯಳಿದು.**

ಇಲ್ಲಿ ಶರಣ ಹಾಗೂ ಮಾನವ ಈ ಎರಡು ಪದಗಳ ನಡುವಿನ ಅಜಗಜಾಂತರವನ್ನು ಮಡಕೆ-ಮಣ್ಣು, ತುಪ್ಪ-ಬೆಣ್ಣೆ, ಹೊನ್ನು-ಕಬ್ಬುನ, ಮುತ್ತು-ನೀರು ಮುಂತಾದ ಉಪಮಾನಗಳ ಮೂಲಕ ಮನದಟ್ಟು ಮಾಡಿಕೊಟ್ಟಿದ್ದಾರೆ ಬಸವಣ್ಣನವರು.

"ಓದಿ ಬ್ರಾಹ್ಮಣನಾಗು, ಕಾದಿ ಕ್ಷತ್ರಿಯನಾಗು..." ಇತ್ಯಾದಿಗಳನ್ನು ಹೇಳುವ ಕಾವ್ಯಾನಂದರು 'ಮೊದಲು ಮಾನವನಾಗು' ಎಂಬ ಸಂದೇಶ ನೀಡುತ್ತಾರೆ. ಇದೇ ರೀತಿ ಸುಪ್ರಸಿದ್ಧ ಇಂಗ್ಲೀಷ್ ಕವಿ ರಡ್‌ಯಾರ್ಡ್ ಕಿಪ್ಲಿಂಗ್ (Rudyard Kipling) ತನ್ನ 'If' ಎಂಬ ಕವಿತೆಯಲ್ಲಿ –

**If you can fill the unforgiving minute
With sixty seconds worth of distance run
Yours will be the earth with everything that's in it
And what is more, you will be a man my son.**

ಎಂದು ಹೇಳುತ್ತಾನೆ ಎಂಬುದು ಕೆಲವರ ವಾದ. ಆದರೆ ಈ ಇಬ್ಬರೂ ಕವಿಗಳು ಲೌಕಿಕ ಜಗತ್ತಿನಲ್ಲಿ ಬಾಳಲು ಯೋಗ್ಯವಾದ ಮನುಷ್ಯ ಒಬ್ಬ ಶ್ರೇಷ್ಠ ನಾಗರಿಕ (Gentleman) ಆಗುವ ಪರಿಯನ್ನು ಹೇಳಿದರೆ, ಬಸವಣ್ಣನವರು ಮಾನವ ದೇವರಿಂದಾಚೆ ಸಾಗುವ ದಾರಿಯನ್ನು ತೋರುತ್ತಾರೆ. ನಿಜಶರಣ ಎಂಥವನೆಂಬುದನ್ನು ಸಾಮಾನ್ಯ ಮಾನವನಿಗೂ ಶರಣನಿಗೂ ಇರುವ ಅಂತರವನ್ನು ಬಸವಣ್ಣನವರ ಅನೇಕ ವಚನಗಳಲ್ಲಿ ಕಾಣುತ್ತೇವೆ.

**ಕಟ್ಟಿ ಬಿಡುವನೆ ಶರಣನು ? ಬಿಟ್ಟು ಹಿಡಿವನೆ ಶರಣನು ?
ನಡೆದು ತಪ್ಪುವನೆ ಶರಣನು ? ನುಡಿದು ಹುಸಿವನೆ ಶರಣನು ?
ಸಹಜ ಸಜ್ಜನಿಕೆ ತಪ್ಪಿದಡೆ
ಕೂಡಲಸಂಗಯ್ಯ ಮೂಗ ಹಲುದೋರಿ ಕೊಯ್ವ.**

ಕೂಡಲಸಂಗನ ಶರಣರಿಗೆ ಇಂಥ ಛಲಬೇಕು. ಇದರ ಜೊತೆಗೆ ಪರಸತಿ, ಪರಧನ, ಪರದೈವಗಳನ್ನು ಒಲ್ಲೆನೆಂಬ ಸಂಕಲ್ಪವೂ ಇರಬೇಕು. ಅಂಗ-ಜಂಗಮ ಒಂದೆಂಬ ಅಭೇದ ನೀತಿ ಅಳವಡಬೇಕು; ಕೊಲುವೆನೆಂಬ (ಪರೀಕ್ಷಿಸುವೆ) ಭಾಷೆ ಹೊತ್ತ ದೇವನೆದುರು ಸತ್ಯದ ಕೂರಲಗನ್ನು ಹಿಡಿದು ಹೋರಿ ಗೆಲುವೆನೆಂಬ ಛಲವೂ ಇರಬೇಕು ಎನ್ನುತ್ತಾರೆ ಬಸವಣ್ಣನವರು.

**ಶಿವಭಕ್ತನಾಗಿ ತನ್ನ ಹಿಡಿದಿಹೆನೆಂದು ಹೋದಡೆ
ನುಗ್ಗುಮಾಡುವ, ನುಸಿಯ ಮಾಡುವ,
ಮಣ್ಣು ಮಾಡುವ, ಮಸಿಯ ಮಾಡುವ,
ಕೂಡಲಸಂಗಮದೇವರ ನೆರೆನಂಬಿದೆನಾದಡೆ
ಕಡೆಗೆ ತನ್ನಂತೆ ಮಾಡುವ.**

ಮಾನವನಾಗಲು ಜೀವಿ ಏನೂ ಮಾಡದೆ ಸುಮ್ಮನಿದ್ದು ಬಿಟ್ಟರೆ ಸಾಕು. ಆದರೆ ಶರಣನಾಗಬೇಕಾದರೆ, ದೇವನಾಗಬೇಕಾದರೆ ತನು-ಮನ-ಭಾವಗಳಿಂದ ನುಗ್ಗಾಗಬೇಕು. ನುಸಿಯಾಗಬೇಕು; ಮಣ್ಣಾಗಬೇಕು, ಮಸಿಯಾಗಬೇಕು. ಇಷ್ಟೆಲ್ಲ ಆಗುವಾಗ 'ಭಕ್ತಿಯೆಂಬುದು ಮಾಡಬಾರದಯ್ಯ, ಅದು ಗರಗಸದಂತೆ ಹೋಗುತ್ತ ಕೊಯ್ಯುತ್ತದೆ, ಬರುತ್ತ ಕೊಯ್ಯುತ್ತದೆ' ಎನ್ನಿಸಿದರೂ ಛಲ ಹಿಡಿದು ಮುನ್ನುಗ್ಗಬೇಕು. ದೇವನನ್ನು ನೆರೆನಂಬಬೇಕು.

'ನಂಬಿ ಕರೆದಡೆ ಓ ಎಂಬ ಶಿವನು, ನಾದಪ್ರಿಯನೂ ಅಲ್ಲದ, ವೇದಪ್ರಿಯನೂ ಅಲ್ಲದ ಭಕ್ತಿಪ್ರಿಯ ಶಿವ ನೆರೆನಂಬಿದವರ ಕೈಬಿಡದೆ ಕಡೆಗೆ ತನ್ನಂತೆ ಮಾಡುವನು' ಎಂಬ ಮಾತು ಅದೆಷ್ಟು ಅರ್ಥಪೂರ್ಣ!

ತುಕಾರಾಮರನ್ನಾಗಲಿ, ಗೋರಾ ಕುಂಬಾರರನ್ನಾಗಲಿ, ಕಬೀರರನ್ನಾಗಲಿ ಬರಿ ಮನುಷ್ಯರು ಎನ್ನಲಾಗದು. ಇವರು ಸಂತರು, ಮಹಂತರು, ಮನುಜಶ್ರೇಷ್ಠರು, ದೇವನನ್ನು ಅರಿದು, ಆವಾಹನೆಗೈದು, ಆರಾಧಿಸಿ ಒಲಿಸಿಕೊಂಡು ದೇವರೇ ಆಗಿ ಉಳಿದವರು.

**ಕಬೀರಾ ಜಬ್ ಹಮ್ ಪೈದಾ ಹುಯೇ ಥೇ**
**ಜಗ ಹಂಸೆ ಔರ್ ಹಮ್ ರೋಯೇ**
**ಐಸೀ ಕರಣೀ ಕರಚಲ್**
**ತಬ್ ಹಮ್ ಹನ್ಸೆ ಔರ್ ಜಗ ರೋಯೇ.**

ಕಬೀರರ ಈ ಅನುಭಾವದ ನುಡಿಗೂ ಶರಣರ 'ಮರಣವೇ ಮಹಾನವಮಿ' ಎಂಬ ಉಕ್ತಿಗೂ ಶಬ್ದಭೇದವಿರಬಹುದು, ಅರ್ಥಭೇದವಿಲ್ಲ. ದೇಶ, ಭಾಷೆ, ಕಾಲ ಯಾವುದೇ ಆಗಿರಲಿ, ಸಂತರು ಮಹಂತರು ಆಲೋಚಿಸುವ, ಆರಾಧಿಸುವ ರೀತಿ ಒಂದೇ ಆಗಿರುತ್ತದೆ.

'ಆರೂಢ' ಎನ್ನುವುದೂ ಮನುಷ್ಯನ ಒಂದು ಅವಸ್ಥೆ ಎಂದೂ, ಜೀವನದ ಪರಮೋಚ್ಚ ಗುರಿ ಆರೂಢನಾಗುವುದು. ಅರ್ಥಾತ್ ಮನುಷ್ಯನಾಗುವುದೂ ಎಂದು ವಾದಿಸುವ ಪಂಡಿತರೂ ಇದ್ದಾರೆ. 'ಆರೂಢ' ಎಂದರೆ ಸಾಮಾನ್ಯ ಮಾನವರು ಏರಲಾರದ ಎತ್ತರಕ್ಕೆ ಏರಿದವ; ಜೀವಾತ್ಮ ತನ್ನ ಸಾಧನೆಯಿಂದ ಒಂದೊಂದೇ ಹಂತವನ್ನು ದಾಟುತ್ತ, ದಾಡುತ್ತ, ಮೆಟ್ಟಿಲುಗಳನ್ನು ಏರುತ್ತ, ಏರುತ್ತ ಪರಮಾತ್ಮನ ಬಳಿ ಸಾರಿ ಪರಾಮಾತ್ಮನೇ ತಾನಾಗುವ ಹಂತ ತಲುಪಿದಾಗ 'ಆರೂಢ, ನಿಜಾರೂಢ'ನೆನ್ನಿಸಿಕೊಳ್ಳುತ್ತಾನೆ. ಇಂಥ ಮಹಾನುಭಾವರನ್ನು 'ಮಾನವ' ಎಂದು ಕರೆದು ಕೈತೊಳೆದುಕೊಳ್ಳಲಾದೀತೆ ?

ಹುಬ್ಬಳ್ಳಿ ಪರಿಸರದಲ್ಲಿ ಭಕ್ತಿ ಮೆರೆದು ಹೆಸರಾದ ಸಿದ್ಧಾರೂಢರು ಎಂಥ ಜ್ಞಾನಿಗಳಾಗಿದ್ದಾರೆಂದರೆ, ಅಥಣಿಯ ಭಕ್ತರು ಒಂದು ಸಲ ಹುಬ್ಬಳ್ಳಿಗೆ ಹೋಗಿ ಅವರನ್ನು ಕಂಡು "ಶಿವತತ್ತ್ವ ಬೋಧಿಸಬೇಕು ಅಪ್ಪಾ" ಎಂದು ಬೇಡಿಕೊಂಡಾಗ ನಕ್ಕು 'ಶಿವನನ್ನೇ (ಅಥಣಿ ಶಿವಯೋಗಿಗಳನ್ನೇ) ಮನೆಯಲ್ಲಿ ಬಿಟ್ಟು ನನ್ನಿಂದ ಶಿವತತ್ತ್ವ ಕೇಳಾಕ ಬಂದೀರಲ್ರೆಪಾ. ನಾನು ಬರೆ ಶಿವತತ್ತ್ವ ಬೋಧಿಸುವವ, ಅಂವಾ ಮುರುಘೇಂದ್ರ ಶಿವಯೋಗಿ ಸಾಕ್ಷಾತ್ ಶಿವ. ಹೋಗ್ರಿ ಅಂವನ ದರ್ಶನ ತೊಗೊರ್‍ರಿ, ನಿಮಗ ಶಿವಾನ ಸಿಗ್ತಾನ !' ಎಂದು ಹೇಳಿದರಂತೆ. ಶರಣರ ತತ್ತ್ವಗಳನ್ನು ಅಕ್ಷರಶಃ ಆಚರಣೆಯಲ್ಲಿ ತಂದ ಅಥಣಿ ಶಿವಯೋಗಿಗಳನ್ನು ಸಾಕ್ಷಾತ್ ಶಿವನೆಂದು ಪರಿಭಾವಿಸುವ ಸಿದ್ಧಾರೂಢರು ಎನಗಿಂತ ಕಿರಿಯರಿಲ್ಲ-ಶಿವಭಕ್ತರಿಗಿಂತ ಹಿರಿಯರಿಲ್ಲ. ಎನ್ನ ತಪ್ಪು ಅನಂತಕೋಟಿ. ನಿಮ್ಮ ಸೈರಣೆಗೆ ಲೆಕ್ಕವಿಲ್ಲ.... ಎನ್ನುವ ಬಸವಣ್ಣನವರ ಕಲ್ಪನೆಗೆ ಅದೆಷ್ಟು ಹತ್ತಿರವಾಗಿದ್ದಾರೆ! ಆದರೆ ಈ ಇಬ್ಬರೂ ಮಹಂತರ ನಡುವೆ ಭೇದ ಹುಟ್ಟಿಸಿ, ಭಕ್ತರ ಮನಸ್ಸಿನಲ್ಲಿ ಗೊಂದಲ ಹುಟ್ಟಿಸುವ, ಅಪ್ಪನನ್ನೇ ಅರಿಯದ, ಅವನ ಅದ್ವೈತವನ್ನೇ ತಿಳಿಯದ ಉಭಯ ಸಂದೇಹಿಗಳ ಬಗ್ಗೆ ಸಾಧಕರು ಎಚ್ಚರಿಕೆಯಿಂದಿರಬೇಕು.

**ನಡೆಯಲಿ ದ್ವೈತ, ನುಡಿಯಲದ್ವೈತ**
**ಆಚಾರದಲ್ಲಿ ದ್ವೈತ, ವಿಚಾರದಲದ್ವೈತ**
**ಇರವಿನಲಿ ದ್ವೈತ, ಪ್ರದರ್ಶನದಲದ್ವೈತ !**
**ಇಂಥ ಉಭಯಸಂದೇಹಿಗಳು ನಿಮ್ಮ**
**ಶರಣರನದೆಂತು ಅರಿದಾರು, ಸದ್ಗುರು ಬಸವಲಿಂಗಾ?**

ಅರಿವು-ಆಚಾರಗಳಲ್ಲಿ ಒಂದಾಗದವರ ಕಂಡು ಮನ ನೋಯುತ್ತದೆ. ತಿಳಿಯದೆ ತಿಳಿಯಾಗಿಸುವ ಕಲೆ ಅದು ಹೇಗೆ ಅಳವಟ್ಟೀತು? ಅದ್ವೈತದ ನಿಜವನರಿವರೆ ಇಂಥವರು?

**ಅದ್ವೈತ ಎಂದರೆ ನೀಗುವುದು,**
**ಎಡರನ್ನು ನೀಗುವುದು, ಎರಡನ್ನು ನೀಗುವುದು,**
**ಮೇಲನ್ನು ನೀಗುವುದು, ಕೀಳನ್ನು ನೀಗುವುದು,**
**ಪ್ರಾಣಗುಣ ನೀಗುವುದು, ಪ್ರಾಣಗುಣ ನೀಗುವುದು,**
**ನೀಗುತ್ತ ಸಾಗುವುದು, ಸಾಗುತ್ತ ಮಾಗುವುದು**
**ನಿಷ್ಪತ್ತಿ ಫಲವಾಗಿ ತೊಟ್ಟ ಕಳಚುವುದು,**
**ಲಿಂಗಯ್ಯನನ್ನರಿದು ಸಂಗಯ್ಯನಾಗುವುದು**
**ಎನ್ನರಿಕೆಯಲಿ ದೋಷವಿರೆ**
**ಮನ್ನಿಸುವುದಯ್ಯಾ, ಸದ್ಗುರು ಬಸವಲಿಂಗ'**

ಇದು ನನ್ನ ನಂಬಿಕೆ.

ನಮ್ಮೂರಿಗೆ ಅದ್ವೈತ ಬೋಧಿಸಲು ಬಂದಿದ್ದ ಪಂಡಿತರ ದಂಡು ಮಾಡಿದ ಬಾರಾಭಾನಗಡಿ ಏನು ಗೊತ್ತೆ? ಆರು ಜನ ಸೇರಿ ಒಂದು ವಾರದಲ್ಲಿ ಒಂದು ನೂರ ನಲವತ್ತ ನಾಲ್ಕು ಮೈಸೂರು ಸ್ಯಾಂಡಲ್ ಸಾಬೂನು ಹಚ್ಚಿ



ಮೈ ತೊಳೆದುಕೊಂಡರು. ತುಪ್ಪದಲ್ಲಿ ಸೀಕರಣೆ ಕಲಸಿಕೊಂಡು ಉಂಡರು. ಉಂಡೂ ಹೋದರು. ಕೊಂಡೂ ಹೋದರು ಎಂದು ಸಂಘಟಕರು ಕೈ ಕೈ ಹಿಚುಕಿಕೊಂಡರು. ಕೊನೆಯ ದಿನ ಸಂಭಾವನೆಗಾಗಿ ದೊಡ್ಡರಾದ್ಧಾಂತ ಮಾಡಿದರು. ಇವರೆಲ್ಲ ಶಾಸ್ತ್ರದ ಹಿರಿಯರು; ವಸ್ತ್ರದ ಹಿರಿಯರು, ಇಂಥವರನ್ನು....

**ಓದಿನ ಹಿರಿಯರು, ವೇದದ ಹಿರಿಯರು,**
**ಶಾಸ್ತ್ರದ ಹಿರಿಯರು, ಪುರಾಣದ ಹಿರಿಯರು,**
**ವೇಷದ ಹಿರಿಯರು, ಭಾಷೆಯ ಹಿರಿಯರು,**
**ಇವರೆಲ್ಲ ತಮ್ಮ ತಮ್ಮನೆ ಮೆರೆದರಲ್ಲದೆ,**
**ನಿಮ್ಮ ಮೆರೆದುದಿಲ್ಲ.**
**ತಮ್ಮ ಮರೆದು ನಿಮ್ಮ ಮೆರೆದೊಡೆ ಕೂಡಿಕೊಂಡಿದ್ದ**
**ನಮ್ಮ ಕೂಡಲಸಂಗಮದೇವ.**

ಎನ್ನುತ್ತಾರೆ ಬಸವಣ್ಣನವರು.

ಹೀಗೆ ಓದು, ವೇದ, ಶಾಸ್ತ್ರ, ಪುರಾಣ, ಭಾಷೆಗಳ ಪಾಂಡಿತ್ಯಜನ್ಯ ಅಹಂಕಾರ ಕಳಚಿ ನಮ್ರತೆಯನ್ನು ಮೈಗೂಡಿಸಿಕೊಳ್ಳುವ ಶರಣರು ಮಾತ್ರ ದೇವನೊಲುಮೆಗೆ ಪಾತ್ರರಾಗುತ್ತಾರೆ. 'ಅರಿದಡೆ ಶರಣ, ಮರೆದಡೆ ಮಾನವ' ಎಂದು ಬಸವಣ್ಣನವರು ಹೇಳಿರುವುದರ ಔಚಿತ್ಯಕ್ಕೆ ಶರಣರ ಇನ್ನೂ ಅನೇಕ ವಚನಗಳು ಸಾಕ್ಷಿ ಒದಗಿಸುತ್ತವೆ.

'ಅರಿದಡೆ ಶರಣ, ಮರೆದಡೆ ಮಾನವ' ಎಂಬ ಕೆಲವರ ಮಾತು ಕೇವಲ ಪ್ರಾಸದ ತರ್ಕ. ಇಲ್ಲಿ ಭಾಷಿಕ ಅಧ್ಯಯನದ ಕೊರತೆಯೂ ಎದ್ದು ಕಾಣುತ್ತದೆ. 'ಶರಣ' ಎಂಬುದು ವ್ಯಕ್ತಿವಾಚಕ ನಾಮಪದವಾಗಿದೆ. 'ಮರಣ' ಈ ಗುಂಪಿಗೆ ಸೇರುವುದಿಲ್ಲ. ಬಸವಣ್ಣ ತನ್ನ ವಚನಗಳಲ್ಲಿ ಮಾಡುವ ಹೊಸ ಪ್ರಯೋಗಗಳನ್ನು ಗಮನಿಸಿದರೆ ಆತನ ಒಬ್ಬ ಪ್ರಭಾವಿ ಭಾಷಾಶಾಸ್ತ್ರಜ್ಞನಾಗಿ ತೋರುವುದರಿಂದ ಪ್ರಜ್ಞಾಪೂರ್ವಕವಾಗಿಯೇ 'ಶರಣ' ಹಾಗೂ 'ಮಾನವ' ಎಂಬ ವ್ಯಕ್ತಿವಾಚಕ ನಾಮಪದಗಳನ್ನೇ ಬಳಸಿದ್ದಾನೆ.

ಶರಣರ 'ಷಟ್‌ಸ್ಥಲ' ಸಿದ್ಧಾಂತದ ಹಿನ್ನೆಲೆಯಲ್ಲಿಯೂ 'ಶರಣ' ಪದದ ಬಳಕೆ ತುಂಬ ಗಂಭೀರವಾದುದು. ಮಾನವ ಮೊದಲು ಭಕ್ತನಾಗಬೇಕು ನಂತರ ಮಹೇಶ, ಪ್ರಸಾದಿ, ಪ್ರಾಣಲಿಂಗಿ ಈ ಎಲ್ಲ ಸ್ಥಲಗಳಲ್ಲೂ ಐಕ್ಯಸ್ಥಲ ತಲುಪಿ, ಪರಿಪೂರ್ಣವಾಗಿ ಹೊರಹೊಮ್ಮಿ, ಶರಣಸ್ಥಲಕ್ಕೆ ಬಂದು ಮುಟ್ಟಿದಾಗ ಪರಮೇಶ್ವರನನ್ನೇ ತನ್ನ ಮನದ ಕೊನೆಯ ಮೊನೆಯ ಮೇಲೆ ಅಡಗಿಸಿಕೊಂಡವನಾಗಿರುತ್ತಾನೆ; ಐಕ್ಯನಿಗೆ ಅನತಿದೂರದಲ್ಲಿ ನಿಲ್ಲುತ್ತಾನೆ. 'ಐಕ್ಯ' ಎಂದರೆ ಬೆಳಗು, ಬಯಲು, ಕತ್ತಲೆ-ಬೆಳಕುಗಳನ್ನು ಮೀರಿದ ಉಪಮಾತೀತ ಶಕ್ತಿ. ಈ ಸ್ಥಲವನ್ನು 'ಮಾನವ' ಸ್ಥಿತಿಯ ಹಂತದಲ್ಲೇ ಉಳಿದು ತಲುಪುವುದು ಸಾಧ್ಯವೇ ?

ತನ್ನ ಪಾದವನ್ನೇ ಪರುಷವಾಗಿಸಿಕೊಂಡ ಉಪಮಾತೀತ ಶಕ್ತಿಯೇ ಶರಣ. ಈತನನ್ನು 'ಮಾನವ'ನಿಂದ ಭಿನ್ನ ಎಂದು ಪರಿಗಣಿಸಬೇಕಲ್ಲವೆ? ಆದ್ದರಿಂದ 'ಅರಿದಡೆ ಶರಣ ಮರೆದಡೆ ಮಾನವ' ಎಂಬುದೇ ಸರಿಯಾದ ಓದು ಎಂಬುದರಲ್ಲಿ ಸಂದೇಹವೇ ಇಲ್ಲ. ■



ಜೂನ್ ೨೩ ರಂದು ಹೊಸಕೋಟೆಯ ಶ್ರೀ ಬಸವ ಭವನ ನಿರ್ಮಾಣ ಸಮಿತಿ ಏರ್ಪಡಿಸಿದ್ದ ಬಸವ ಭವನ ಕಟ್ಟಡದ ಗುದ್ದಲಿ ಪೂಜಾ ಸಮಾರಂಭ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ನೆರವೇರಿತು. ಈ ಸಂದರ್ಭದಲ್ಲಿ ಹರಗುರು ಚರಮೂರ್ತಿಗಳು ಹಾಗೂ ಬಸವ ಭವನ ನಿರ್ಮಾಣ ಸಮಿತಿಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

## ಕ್ಷೇತ್ರವಾರ್ತೆ : ಶ್ರೀಮಠದಲ್ಲಿ ೨೦೨೨-೨೩ ದಾಖಲಾತಿ ಮಾಡಲು ಮಕ್ಕಳೊಂದಿಗೆ ಬಂದ ಪೋಷಕರ ದಂಡು – ದೃಶ್ಯಾವಳಿಗಳು














ಪ್ರಾತಃಸ್ಮರಣೀಯರು

# ಆಸ್ಥಾನ ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯ

– ಎಚ್.ಎಸ್. ಸಿದ್ಧಗಂಗಪ್ಪ *

ಬಹುಭಾಷಾ ಪಂಡಿತರೂ, ಆಸ್ಥಾನ ವಿದ್ವಾನ್ ಎಂಬ ಗೌರವಕ್ಕೆ ಭಾಜನರಾಗಿದ್ದ ಎಂ.ಜಿ. ನಂಜುಂಡಾರಾಧ್ಯರು, ಸಂಸ್ಕೃತ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಸ್ವಾತಂತ್ರ್ಯ ಹೋರಾಟಗಾರರಾಗಿ, ಕಾವ್ಯ, ನಾಟಕ, ಪ್ರಬಂಧ, ವಿಮರ್ಶೆ, ಜೀವನಚರಿತ್ರೆ, ಗ್ರಂಥ ಸಂಪಾದನೆ, ಸಂಶೋಧನೆ, ಅನುವಾದ, ಕಾದಂಬರಿ, ಮಕ್ಕಳ ಸಾಹಿತ್ಯವೂ ಸೇರಿದಂತೆ ಅನೇಕ ಸಾಹಿತ್ಯ ಪ್ರಕಾರಗಳಲ್ಲಿ ೮೦ಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ರಚಿಸುವುದರ ಮೂಲಕ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದರು. ಇಂತಹ ಸಾಧಕರನ್ನು ಸ್ಮರಿಸುವುದು ನಮ್ಮ ಆದ್ಯಕರ್ತವ್ಯವೂ ಹೌದು!

**ಜನನ :** ಆಗಸ್ಟ್ ೧, ೧೯೧೪ ರಂದು ಕೋಲಾರ ಜಿಲ್ಲೆಯ ಗೌರೀಬಿದನೂರು ತಾಲ್ಲೂಕಿನ ಗುಂಡ್ಲಹಳ್ಳಿಯಲ್ಲಿ, ಮಠದ ಗಂಗಾಧರಯ್ಯ, ತಾಯಿ ಶ್ರೀಮತಿ ವೀರಮ್ಮ ಅವರ ಪುತ್ರರತ್ನವಾಗಿ ಜನಿಸಿದರು. ಅವರದು ಸುಸಂಸ್ಕೃತ, ಸಂಪ್ರದಾಯಸ್ಥ ಕುಟುಂಬ. ಜಂಗಮ ವೃತ್ತಿ ಹಾಗೂ ಕೃಷಿ ಕಾಯಕದಲ್ಲಿಯೇ ಬದುಕನ್ನು ಕಟ್ಟಿಕೊಂಡಿದ್ದರು. ಹಾಸಿಗೆ ಇದ್ದಷ್ಟು ಕಾಲು ಚಾಚು ಎಂಬ ನಾಣ್ಣುಡಿಗನುಗುಣವಾಗಿ ಜೀವನ ನಡೆಸುತ್ತಾ ಅಲ್ಪತೃಪ್ತರಾಗಿ ನೆಮ್ಮದಿಯನ್ನು ಕಂಡುಕೊಂಡಿದ್ದರು. ಮನೆಯ ಸುಸಂಸ್ಕೃತ ವಾತಾವರಣ ಬಾಲಕ ನಂಜುಂಡಾರಾಧ್ಯರ ಮೇಲೆ ಗಾಢವಾದ ಪ್ರಭಾವ ಬೀರಿತ್ತು. ಅಲ್ಲದೆ ಕಷ್ಟಗಳ ಅರಿವೂ ಇತ್ತು.

**ಶಿಕ್ಷಣ :** ಹುಟ್ಟಿದೂರಿನಲ್ಲಿ ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣವನ್ನು ಮುಗಿಸಿದ ಮೇಲೆ ಮುಂದೆ ಓದಬೇಕೆಂಬ ತುಡಿತವಿದ್ದರೂ ಹದಗೆಟ್ಟ ಆರ್ಥಿಕ ಪರಿಸ್ಥಿತಿಯಿಂದ ಮುಂದೆ ಓದಲು ಅವಕಾಶವಾಗದೆ ಮನೆಯವರೊಂದಿಗೆ ಮನೆತನದ ವೃತ್ತಿಯಾದ ಜಂಗಮ ವೃತ್ತಿ ಹಾಗೂ ಕೃಷಿ ಕಾಯದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಸದುದ್ದೇಶದಿಂದ ಕೂಡಿದ ಮನಸ್ಸಿದ್ದರೆ ದಯಾಮಯನಾದ ಶಿವನೂ ದಾರಿ ತೋರಿಸುತ್ತಾನೆ ಎಂಬ ಅನುಭವಿಗಳ ಮಾತು ಬಾಲಕ ನಂಜುಂಡಾರಾಧ್ಯರ ಪಾಲಿಗೆ ಹುಸಿಯಾಗಲಿಲ್ಲ! ಓದಿನ ಬಗ್ಗೆ ಆಸಕ್ತಿಯನ್ನು ಗಮನಿಸಿದ ಬೆಂಗಳೂರಿನ ಸಿದ್ಧರಾಮಣ್ಣ ಎಂಬುವರು ಬೆಂಗಳೂರಿಗೆ ಬಂದು ಶಿಕ್ಷಣವನ್ನು ಮುಂದುವರಿಸುವಂತೆ ಹೇಳಿದರಲ್ಲದೆ ಅಗತ್ಯವಾದ ವ್ಯವಸ್ಥೆಯನ್ನು ಮಾಡಿಕೊಟ್ಟರು. ಶ್ರೀ ಮಹಂತಿನ ಮಠದಲ್ಲಿ ವಸತಿ ಸೌಕರ್ಯ ದೊರೆಯಿತು. ನಂಜುಂಡಾರಾಧ್ಯರು ವಾರಾನ್ನದ ಮನೆಗಳನ್ನು ಹುಡುಕಿಕೊಂಡರು. ವಾರದಲ್ಲಿ ಒಂದು ದಿನ ಸಿದ್ಧರಾಮಣ್ಣ ಅವರ ಮನೆಗೂ ಹೋಗುತ್ತಿದ್ದರು. ನಂಜುಂಡಾರಾಧ್ಯರಲ್ಲಿನ ವಿದ್ಯಾಸಕ್ತಿಯನ್ನು ಗಮನಿಸಿದ ಅವರು "ಇಡೀ ವಾರವೆಲ್ಲ ನಮ್ಮ ಮನೆಯಲ್ಲಿಯೇ ಊಟ" ಮಾಡು ಎಂದು ಹೇಳಿದಾಗ ನಂಜುಂಡಾರಾಧ್ಯರು ಕೊಟ್ಟ ಉತ್ತರ "ಇನ್ನು ನಾಲ್ಕು ಜನ ಗೆಳೆಯರಿದ್ದಾರೆ. ಅವರಿಗೂ ನೀವು ಊಟ ನೀಡುವುದಾದರೆ ನಾನು ಬರುತ್ತೇನೆ" ಎಂದು ಹೇಳಿದರು. ನಂಜುಂಡಾರಾಧ್ಯರ ಮಾನವೀಯತೆ, ಹೃದಯ ವೈಶಾಲ್ಯತೆಯನ್ನು ಕಂಡು ಸಂತೋಷವಾಗಿ "ಎಲ್ಲರನ್ನೂ ಕರೆದುಕೊಂಡು ಬಾ" ಎಂದು ಹೇಳಿದಾಗ ಅದುವರೆಗೂ ಕಾಡುತ್ತಿದ್ದ ಊಟದ ಸಮಸ್ಯೆ ಬಗೆಹರಿದಂತಾಯಿತು.

ಬೆಂಗಳೂರಿನ ಸಂಸ್ಕೃತ ಪಾಠಶಾಲೆಯಲ್ಲಿ ಪ್ರವೇಶ ಪಡೆಯಲು ಹೋದಾಗ ನಂಜುಂಡಾರಾಧ್ಯರಿಗೆ ೧೮ ವರ್ಷ ವಯಸ್ಸಾಗಿತ್ತು. ಈ ವಯಸ್ಸಿನಲ್ಲಿ ಸಂಸ್ಕೃತ ಕಲಿಯಲು ಬಂದಿರುವ ಯುವಕನನ್ನು ಕಂಡು ಅಧ್ಯಾಪಕರಿಗೆ ಆಶ್ಚರ್ಯವಾಯಿತು. ಈತ ವಿದ್ಯಾಭ್ಯಾಸ ಮಾಡುವುದು ಅಸಂಭವವೆನಿಸಿತು. ಆದರೆ ಮುಂದೆ ಕಲಿಯುವುದರ ಬಗ್ಗೆ ಆಸಕ್ತಿ, ಉತ್ಸಾಹ, ಗ್ರಹಿಕಾಶಕ್ತಿಯನ್ನು ಕಂಡು ಮೊದಮೊದಲು ಅಸಡ್ಡೆಯಿಂದ ಕಂಡವರೇ ಪ್ರೋತ್ಸಾಹ ನೀಡಿದರು. ವಿದ್ವಾಂಸರಾದ ಅಧ್ಯಾಪಕರ ವಾತ್ಸಲ್ಯದ ಶಿಷ್ಯರಾಗಿ ಅಲಂಕಾರ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಕೆಲವು ವರ್ಷಗಳ ಕಾಲ ಸಿದ್ಧಗಂಗಾ ಕ್ಷೇತ್ರದಲ್ಲಿ ಆಶ್ರಯ ಪಡೆದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಆಶೀರ್ವಾದದಿಂದ ಅಲಂಕಾರ ಮಾಧ್ಯಮ ತರಗತಿಯಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರು.

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು–೯೧ ಮೊ: ೯೮೪೫೫ ೬೫೮೭೧



ವೃತ್ತಿ ಜೀವನ : ೧೯೪೨ ರಲ್ಲಿ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಅಧ್ಯಾಪಕರಾಗಿ ವೃತ್ತಿ ಜೀವನವನ್ನು ಪ್ರಾರಂಭಿಸಿದರು. ಆಗ ಭಾರತದಲ್ಲಿ ಸ್ವಾತಂತ್ರ್ಯಕ್ಕಾಗಿ ಮಹಾತ್ಮಗಾಂಧೀಜಿ ಅವರ ನೇತೃತ್ವದಲ್ಲಿ ಅಹಿಂಸಾತ್ಮಕ ಚಳವಳಿ ನಡೆಯುತ್ತಿತ್ತು. ಈ ಚಳವಳಿ ನಂಜುಂಡಾರಾಧ್ಯರನ್ನು ಆಕರ್ಷಿಸಿತು. ಅವರು ರಚನಾತ್ಮಕ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದರು. ಅವರು ಜೀವನ ನಡೆಸುವುದಕ್ಕಾಗಿ ವಿದ್ಯೆ ಕಲಿಯಲು ಬಯಸಲಿಲ್ಲ. ಜ್ಞಾನಾರ್ಜನೆಗಾಗಿ ಜೀವನವನ್ನು ಮುಡುಪಾಗಿಟ್ಟರು. ಸ್ವತಃ ತೆಲುಗಿನ ಕೃತಿಗಳನ್ನು ಓದಿ ತೆಲುಗು ಭಾಷೆಯಲ್ಲಿ ಪಾಂಡಿತ್ಯ ಪಡೆದರು. ಓದುವುದು ಅವರ ನಿರಂತರ ಕಾಯಕವಾಯಿತು. ಮೈಸೂರಿನಲ್ಲಿ ಉಚಿತ ಹಿಂದಿ ಶಿಕ್ಷಣ ದೊರೆಯುತ್ತದೆಂದು ತಿಳಿದು ಆಸ್ಥಾನ ವಿದ್ವಾನ್ ಗುರುಶಾಂತ ಶಾಸ್ತ್ರಿಗಳವರ ನೆರವಿನಿಂದ ಹಿಂದಿ ಭಾಷೆ ಕಲಿತರು. ಸ್ವತಃ ಅಧ್ಯಯನ ಮಾಡಿ ಮದರಾಸಿನ ಕನ್ನಡ ಪಂಡಿತ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಕನ್ನಡ ಸಾಹಿತ್ಯದಲ್ಲಿ ಶ್ರೀಮಂತರಾದರು. ಸ್ವಂತವಾಗಿ ಶಕ್ತಿವಿಶಿಷ್ಟಾದ್ವೈತ ಶಾಸ್ತ್ರವನ್ನು ಓದಿ ವಿದ್ವತ್ ಪದವಿ ಪಡೆದರು. ಇಷ್ಟೆಲ್ಲ ಪ್ರತಿಭೆಯಿದ್ದರೂ ಜಂಗಮ ವೃತ್ತಿಯನ್ನು ಕನಿಷ್ಠವೆಂದು ಕಡೆಗಣಿಸಲಿಲ್ಲ. ಆ ವೃತ್ತಿಯಲ್ಲಿನ ಶ್ರೇಷ್ಠತೆಯನ್ನು, ಶ್ರೇಯಸ್ಸಿನ ದಾರಿಯನ್ನು ತೋರಿಸಿ ಕೊಟ್ಟರು. ಅದಕ್ಕಿರುವ ಶಾಸ್ತ್ರೀಯ, ತಾತ್ವಿಕ ಹಾಗೂ ವೈಜ್ಞಾನಿಕ ಹಿನ್ನಲೆಯನ್ನು ಸಂಶೋಧನೆ ಮಾಡಿ, 'ಲಿಂಗಪೂಜಾ ವಿಧಿ', 'ವೀರಶೈವ ಪೂರ್ವಪ್ರಯೋಗ ರತ್ನಂ', 'ವೀರಶೈವಾಗಮ ಪ್ರಯೋಗರತ್ನಂ', 'ವೀರಶೈವ ಉತ್ತರ ಪ್ರಯೋಗ', 'ವೀರಶೈವ ಸದಾಚಾರ ಸಂಗ್ರಹ' ಮುಂತಾದ ಗ್ರಂಥಗಳು ರಚನೆಯಾದವು. ಇದರಿಂದ ವೃತ್ತಿಯ ಬಗೆಗೆ ಘನತೆ ಗೌರವವನ್ನು ತಂದುಕೊಟ್ಟರು.

ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಅಧ್ಯಾಪಕರಾಗಿ ಹತ್ತು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಅವರು ಅಲ್ಲಿ ಸೇವೆ ಸಲ್ಲಿಸುತ್ತಿದ್ದ ಸಂದರ್ಭದಲ್ಲಿ ಲಿಂಗಾಯತ ವಿದ್ಯಾರ್ಥಿಗಳಿಗೆ ಇಲ್ಲಿ 'ಶಕ್ತಿ ವಿಶಿಷ್ಟಾದ್ವೈತ ವೇದಾಂತ ತರಗತಿ'ಗಳನ್ನು ಪ್ರಾರಂಭಿಸಬೇಕೆಂದು ಆಲೋಚಿಸಿ ಅದನ್ನು ಸಾಕಾರಗೊಳಿಸಲು ಅವಿರಹಿತ ಪ್ರಾಮಾಣಿಕ ಪ್ರಯತ್ನ ಮಾಡಿದರು. ಅದಕ್ಕೆ ಸೂಕ್ತ ಪಠ್ಯ ಗ್ರಂಥಗಳನ್ನೊದಗಿಸಿದರು. ೧೯೫೩ ರಲ್ಲಿ ಬೆಂಗಳೂರಿನಿಂದ ಮೈಸೂರು ಮಹಾರಾಜ ಸಂಸ್ಕೃತ ಕಾಲೇಜಿನ ವೀರಶೈವಾಗಮದ ಉಪ ಪ್ರಾಧ್ಯಾಪಕರಾಗಿ ನೇಮಕಗೊಂಡರು. ೧೯೫೯ ರಲ್ಲಿ ಸಂಸ್ಕೃತ ವಿದ್ಯಾ ಇಲಾಖೆ ಇವರನ್ನು ವೀರಶೈವಾಗಮದ ಪ್ರಾಧ್ಯಾಪಕರನ್ನಾಗಿ ನೇಮಕ ಮಾಡಿತು. ೧೯೬೫ ರಲ್ಲಿ ಶಕ್ತಿ ವಿಶಿಷ್ಟಾದ್ವೈತ ವೇದಾಂತದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ೧೯೭೫ ರಲ್ಲಿ ಸೇವೆಯಿಂದ ನಿವೃತ್ತರಾದರು.

ನಂಜುಂಡಾರಾಧ್ಯರು ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಕೃಷಿ ಮಾಡಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಅವರು ಕನ್ನಡ, ಸಂಸ್ಕೃತ, ತೆಲುಗು ಭಾಷೆಗಳಲ್ಲಿ ಕೃತಿ ರಚನೆ ಮಾಡಿರುವುದು ಅವರ ವಿದ್ವತ್ತಿನ ದ್ಯೋತಕವಾಗಿದೆ. ಕವಿ ಮಿಟ್ಟನ್ ಹೇಳಿದ ಮಾತು ಅವರ ಮೇಲೆ ಸಾಕಷ್ಟು ಪ್ರಭಾವ ಬೀರಿದುದರಿಂದ ಅಂತಹ ಸಾಹಿತ್ಯವನ್ನು ರಚಿಸಲು ಪ್ರಾಮಾಣಿಕ ಪ್ರಯತ್ನ ಮಾಡಿ ಯಶಸ್ವಿಯಾದರು.

"A good book is the precious life blood of a master spirit., emblanced and treasured upon purpose to a life beyond life."

ಒಳ್ಳೆಯ ಕೃತಿಕರ್ತನ ಕೃತಿ ಅವನ ಜೀವನದ ನಂತರವೂ ಮೌಲ್ಯಯುವಾಗಿರಬೇಕು. ಅವರು ಒಂದು ಕಡೆ ತಮ್ಮ ಮನದಾಳದ ಮಾತುಗಳನ್ನು ಹೀಗೆ ಹಂಚಿಕೊಂಡಿದ್ದಾರೆ.

"ಸಂಸಾರಿ ಸಾಮಾನ್ಯವಾಗಿ ತಾನು ಗಳಿಸುವುದು ತನ್ನ ಸಂತಾನಕ್ಕಾಗಿ. ತನ್ನ ಸಂತಾನ ತನಗಿಂತ ಎಲ್ಲ ರೀತಿಯಿಂದಲೂ ಉನ್ನತವಾಗಬೇಕೆಂದು ಪ್ರತಿಯೊಬ್ಬರು ಬಯಸುತ್ತಾರೆ. ತನ್ನ ಸಾಧನೆಯನ್ನು ಮಕ್ಕಳು ಮುಂದುವರಿಸಬೇಕೆಂಬುದು ಎಲ್ಲರ ಆಸೆ. ತಾನು ಗಳಿಸಿದ ಭೌತಿಕ ಸಂಪತ್ತಿಗೆ ಹಕ್ಕುದಾರನಾಗುವಂತೆ ತಾನು ಗಳಿಸಿದ ಜ್ಞಾನ ಸಂಪತ್ತಿಗೂ ಅಧಿಕಾರಿಯಾಗಬೇಕೆಂದು ಸರ್ವತ ಹಂಬಲವಾಗಿರುತ್ತದೆ. ಅದು ಸಹಜವೂ ಹೌದು, ಆದರೆ ಪ್ರಸಿದ್ಧ ಲೇಖಕ ಟಾಪ್ಲರ್‌ರವರು ಹೇಳಿರುವಂತೆ ಇಂದು ಜೀವನದ ಎಲ್ಲ ಸ್ತರದಲ್ಲೂ ಮನುಷ್ಯ ಮತ್ತು ಅವನ ಪರಿಸರ ಹಾಗೂ ಪರಿಸರದ ಸಂಬಂಧದಲ್ಲಿ ಕ್ಷಣಕ್ಷಣಕ್ಕೂ ಬದಲಾವಣೆಯಾಗುತ್ತಿರುವ ಪ್ರವೃತ್ತಿ ಬೆಳೆಯುತ್ತಿದೆ. ಯಾವುದರ ಬಗೆಗೂ ಶಾಶ್ವತವಾದ ಅಭಿಮಾನ, ಶ್ರದ್ಧೆ ತೋರಿಸುವ ಮನೋಧರ್ಮ ಬದಲಾಗುತ್ತದೆ. ಅಂತೆಯೇ ತಂದೆ ತುಳಿದ ದಾರಿಯನ್ನು ಬದಲಾಯಿಸಿಕೊಳ್ಳುವ ಮನೋಧರ್ಮ ಬೆಳೆದಿದೆ. ಆರಾಧ್ಯರು ಸಂಸಾರಿಗಳು, ಸಂಸಾರದಲ್ಲಿ ಆಸಕ್ತಿ, ಅಭಿಮಾನವುಳ್ಳವರಾಗಿದ್ದರು. ಕುಟುಂಬದವರ ಬಗ್ಗೆ ಅಪಾರವಾದ ಪ್ರೀತಿಯನ್ನು ಹೊಂದಿದ್ದರು. ಅನೇಕ ಸಂದರ್ಭಗಳಲ್ಲಿ ಅವರ ಮಾತುಗಳು ಸಂಸಾರದಲ್ಲಿ ಬಿರುಗಾಳಿಯನ್ನುಂಟು ಮಾಡುವಂತಾಗಿದ್ದವು. ಆದರೆ ನಂಜುಂಡಾರಾಧ್ಯರು ಅವರ ಪತ್ನಿಯಲ್ಲಿ ಪರೋಕ್ಷವಾಗಿ ಜ್ಞಾನಾರ್ಜನೆಯ ಸಂಸ್ಕೃತಿಯನ್ನು ಬೆಳೆಸಿದ್ದ ಕಾರಣ, ಪತ್ನಿ ಅವರ ಮಾತುಗಳನ್ನು ಗಂಭೀರವಾಗಿ ತೆಗೆದುಕೊಳ್ಳುತ್ತಿರಲಿಲ್ಲ. ಏಕೆಂದರೆ ಅವರಲ್ಲಿ ಅರಿವಿನ ಜ್ಯೋತಿಯನ್ನು ಬೆಳಗಿಸಿದ್ದರು. ತಾವು ಬರೆದುದ್ದನ್ನು ಮುಕ್ತವಾಗಿ ಪತ್ನಿಯೊಂದಿಗೆ ಹಂಚಿಕೊಳ್ಳುವುದರ ಜೊತೆಗೆ ಅವರ ಸಲಹೆಯನ್ನು ಪೂರ್ವಾಗ್ರ ಪೀಡಿತರಾಗದೆ ಸ್ವೀಕರಿಸುತ್ತಿದ್ದರು. ಅವರು ತಮ್ಮ ವಿದ್ವತ್ತಿನ ಪ್ರತಿಭೆಯನ್ನು ಸಾವಾನ್ಯ ಗೃಹಣಿಯೊಂದಿಗೆ ಹೇಳಿ ಸಲಹೆ ಪಡೆಯುತ್ತಿದ್ದರೆಂದರೆ ಅವರ ಹೃದಯ ವೈಶ್ಯಾಲತೆಗೆ ಸಾಕ್ಷಿಯಾಗಿತ್ತು. 'ವಿದ್ಯಾ ದದಾತಿ ವಿನಯಂ' ಎಂಬ ಆರ್ಯೋಕ್ತಿ ಶ್ರೀಯುತರಿಗೆ ಅಕ್ಷರಶಃ ಅನ್ವಯವಾಗುತ್ತಿದೆಂದು ಅವರನ್ನು ಹತ್ತಿರದಿಂದ ಬಲ್ಲವರು ಹೇಳುತ್ತಿದ್ದರು





೧೯೪೨ ರಲ್ಲಿ 'ಶಿವನ ಸೋಲು' ಎಂಬ ಗೀತ ನಾಟಕವನ್ನು ಬರೆದರು. ಅದಕ್ಕೆ 'ಕಾದಂಬರಿ ಸಾರ್ವಭೌಮ' ಎಂಬ ಕೀರ್ತಿಗೆ ಭಾಜನರಾಗಿದ್ದ ಅ.ನ.ಕೃ.ರವರು ಮುನ್ನುಡಿ ಬರೆಯುತ್ತಾ "ಕವಿ ಲೋಕ ವ್ಯಾಪಾರದಲ್ಲಿ ಲೀನವಾಗದೆ ಅನಾಸಕ್ತಿ ವಹಿಸಿದ್ದರು. ಅದು ಅವನ ಕೃತಿಯ ಮೇಲೆ ತನ್ನ ಮುದ್ರೆಯನ್ನೊತ್ತದಿರುವುದಿಲ್ಲ. ಬಾಳು ಬೇರೆ ಕಲಾಕೃತಿ ಎಂದು ಭಾವಿಸುವುದು ಸತ್ಯಕ್ಕೆ ಅಷ್ಟು ಮೆಚ್ಚುಗೆಯಾಗುವುದಿಲ್ಲ. ಕವಿ ಬೇಡವೆಂದರೂ ಅವನ ಜೀವನದ ರಸ-ವಿಷ ನಿಮಿಷಗಳು ಅವನ ಕೃತಿಯ ಮೇಲೆ ತಮ್ಮ ಪ್ರಭಾವವನ್ನು ಮೂಡಿಸುತ್ತವೆ. ಕವಿಯ ಬಾಳು ಹಿರಿಯ ಬಾಳಾಗಿದ್ದರೆ ಅದರಿಂದ ಲೋಕಕ್ಕೆ ಕಲ್ಯಾಣವಾಗುತ್ತದೆ; ಅವನ ಬಾಳು ಅಲ್ಪತನದಿಂದ ತುಂಬಿದ್ದರೆ ಅದರಿಂದ ಲೋಕದ ಜಂಜಡ ಮತ್ತಷ್ಟು ಹೆಚ್ಚುತ್ತದೆ..... ಉದಾತ್ತ ಧ್ಯೇಯ, ಉಚ್ಚ ವಿಚಾರ, ಮನಂಬುಗುವ ರಸನಿರೂಪಣೆ, ಅಮರತುಂಗಾ ಸಲಿಲದಂತೆ ಹರಿಯುವ ಕನ್ನಡದ ಕಾವ್ಯ ಝರಿಗಳಿಂದ ಶಿವನ ಸೋಲು ತುಂಬಿ ತುಳುಕುತ್ತದೆ. ನವಯುಗದ ಹೊಸ್ತಿಲ ಮೇಲೆ ನಿಂತಿರುವ ಕವಿ ತನ್ನ ದೇಶದ ಭವಿತವ್ಯವನ್ನು ಅಮರವಾಣಿಯಿಂದ ಚಿತ್ರಿಸಿದ್ದಾರೆ. ಭಾರತ ವರ್ಷದ ತರುಣ ಜನಾಂಗದ ನೋಟದ ರಸಗನ್ನಡಿ ಈ ಕಾವ್ಯವೆಂದರೆ ಅತಿಯೋಕ್ತಿಯಲ್ಲ." ಅನಕೃ ಅವರ ಉತ್ಸಾಹದ ನುಡಿಗಳಿಂದ ಪ್ರಭಾವಿತರಾಗಿ ನಂಜುಂಡಾರಾಧ್ಯರು ಸಾಹಿತ್ಯ ಕ್ಷೇತ್ರದಲ್ಲಿ ತಮ್ಮನ್ನು ಅರ್ಪಣಾ ಭಾವದಿಂದ ತೊಡಗಿಸಿಕೊಂಡಿದ್ದು ಈಗ ಇತಿಹಾಸ.

ಸಾಹಿತ್ಯ ಕ್ಷೇತ್ರ : ನಿರಂತರ ಅಧ್ಯಯನದಿಂದ ತಮ್ಮ ಅರಿವಿನ ಕ್ಷಿತಿಜವನ್ನು ವಿಸ್ತರಿಸಿಕೊಂಡ ಆರಾಧ್ಯರು ತಮ್ಮ ಬದುಕನ್ನು ಸಾಹಿತ್ಯ ರಚನೆಗೇ ಮೀಸಲಿಟ್ಟಿದ್ದರು. 'ಪಕ್ಷ್ಮಲಾಕ್ಷಿ' (ಲಘುಕಾವ್ಯ), ಸಿರಿಗನ್ನಡ ಶಿಶುಪಾಲ ವಧ, ಕನ್ನಡ ಕಿರಾತಾರ್ಜುನೀಯ, ಹೃದಯ ಮಂಥನ, ಮಧುರ ಚಿಂತನ, ವಿಜಯನಾದ ಮೊದಲಾದ ಸೃಜನಶೀಲ ಕೃತಿಗಳನ್ನು ಪ್ರಕಟಿಸಿದರು.

ಅನೇಕ ಜನ ಪುಣ್ಯಪುರುಷರ ಜೀವನ ಚರಿತ್ರೆಯನ್ನು ಬರೆಯುವುದರ ಮೂಲಕ ಸಮಾಜಕ್ಕೆ ಅವರ ಕೊಡುಗೆಯನ್ನು ಕೃತಿಗಳ ಮೂಲಕ ಪರಿಚಯಮಾಡಿಕೊಟ್ಟಿದ್ದಾರೆ. ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು, ಇಡಗೂರು ರುದ್ರಕವಿ, ಶ್ರೀ ಗುರು ಹಾಲಸ್ವಾಮಿಗಳು, ಗುಬ್ಬಿ ತೋಟದಪ್ಪನವರು, ಉದ್ದಾನ ಶಿವಯೋಗಿಗಳು, ಗೌರಿಶಂಕರ ಸ್ವಾಮಿಗಳು, ಎಚ್. ಸಿದ್ಧಯ್ಯನವರು, ಪಿ.ಆರ್. ಕರಿಬಸವ ಶಾಸ್ತ್ರಿಗಳು, ಎಸ್.ಆರ್. ಕರಿಬಸವ ಶಾಸ್ತ್ರಿಗಳು, ಸಿರಸಿ ಗುರುಶಾಂತ ಶಾಸ್ತ್ರಿ, ತೋಪಿನ ಮಠದ ಷಡಕ್ಷರ ಶಿವಯೋಗಿ ಮೊದಲಾದವರ ಜೀವನ ಚರಿತ್ರೆಗಳು ಪ್ರಮುಖವಾಗಿದೆ.

ಅವರು ಸಂಶೋಧನೆಗೆ ಹೆಚ್ಚು ಮಹತ್ವವನ್ನು ಕೊಟ್ಟವರು. ಅದರ ಫಲವಾಗಿ ವೀರಶೈವ ವೇದಾಧಿಕಾರ ವಿಜಯ, ವೀರಶೈವ ದರ್ಶನ ಇತಿಹಾಸ, ತತ್ತ್ವಪ್ರಕಾಶ, ಹಿಂದೂ ಧರ್ಮ ಮತ್ತು ವೀರಶೈವ ಸಂಸ್ಕೃತಿ, ಇಷ್ಟಲಿಂಗ ವಿಜ್ಞಾನ, ಗೀತೆಯ ಅಂತರ್ವಾಣಿ ಮುಂತಾದ ಕೃತಿಗಳು ಮೂಡಿಬಂದಿವೆ. ಶ್ರೀಕರ ಭಾಷ್ಯ ಬಗೆಗೆ ಬರೆದ ಪ್ರಸ್ತಾವನೆ ವಿದ್ವಜ್ಜನ ಮಾನ್ಯವಾದುದು.

ನಂಜುಂಡಾರಾಧ್ಯರು ಮಾಡಿದ ಮಹತ್ವದ ಕಾರ್ಯವೆಂದರೆ ಬಸವಪ್ಪ ಶಾಸ್ತ್ರಿಗಳ ಜೀವನ ಚರಿತ್ರೆಯನ್ನು ಮೊದಲ ಬಾರಿಗೆ ಬರೆದು ಪ್ರಕಟಿಸಿದರು. ಬಸವಪ್ಪ ಶಾಸ್ತ್ರಿಗಳ ಸಮಗ್ರ ಕೃತಿಗಳನ್ನು ಒಂದು ಸಂಪುಟದಲ್ಲಿ ಪ್ರಕಟಿಸಿದ ಕೀರ್ತಿ ಅವರದು. ಅಲ್ಲದೆ ಪ್ರೊ. ಮ್ಯಾಕ್ ಡೊನಾಲ್ಡರ್ ಅವರ 'ವೈದಿಕ ಸಾಹಿತ್ಯ ಚರಿತ್ರೆ'ಯನ್ನು ಕನ್ನಡದಲ್ಲಿ ಅನುವಾದಿಸಿರುವುದರ ಮೂಲಕ ವಿಶಿಷ್ಟ ಕೊಡುಗೆಯನ್ನು ನೀಡಿದ್ದಾರೆ.

ಸಾಹಿತ್ಯ ಸೂರ್ಯ ಎಂದೇ ಸಾಹಿತ್ಯ ಕ್ಷೇತ್ರದಲ್ಲಿ ಹಚ್ಚಹಸಿರಾಗಿರುವ ಜ.ಚ.ನಿ. ಅವರಿಗೂ ನಂಜುಂಡಾರಾಧ್ಯರಿಗೂ ಅವಿನಾಭಾವ ಸಂಬಂಧ. ಜ.ಚ.ನಿ.ಯವರ ಪ್ರೇರಣೆ ಹಾಗೂ ಆಶೀರ್ವಾದದಿಂದ 'ಪ್ರಬೋಧ ಪುಸ್ತಕ ಮಾಲೆ' ಎಂಬ ಪ್ರಕಾಶನ ಸಂಸ್ಥೆಯನ್ನು ಅಸ್ತಿತ್ವಕ್ಕೆ ತಂದು ಜ.ಚ.ನಿ. ಅವರ ಅನೇಕ ಮೌಲಿಕ ಕೃತಿಗಳನ್ನು ಈ ಮಾಲೆ ಮೂಲಕ ಪ್ರಕಟಿಸಿದರು.

ಮೈಸೂರು ವಿಶ್ವವಿದ್ಯಾಲಯವು ನಂಜುಂಡಾರಾಧ್ಯರ ವಿದ್ವತ್ತಿನ ಪ್ರಯೋಜನವನ್ನು ಪಡೆದುಕೊಂಡಿತು. ಅವರ ಕೆಲವು ಕೃತಿಗಳು ಮೈಸೂರು ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟಗೊಂಡಿವೆ. ಕವಿ ಮುರಾರಿ (೧೯೭೦), ಮಾಘಕವಿ (೧೯೭೨), ಮಹಾಕವಿ ಭಾರವಿ (೧೯೬೯), ಭಟ್ಟನಾರಾಯಣ (೧೯೬೧) ಮೊದಲಾದ ಕೃತಿಗಳು ಪ್ರಕಟವಾಗಿವೆ.

**ಪ್ರಶಸ್ತಿ-ಗೌರವಗಳು** : ನಂಜುಂಡಾರಾಧ್ಯರ ವಿದ್ವತ್‌ನ್ನು ಗಮನಿಸಿದ ಮೈಸೂರು ಮಹಾರಾಜರು 'ಆಸ್ಥಾನ ವಿದ್ವಾನ್' ಪದವಿ ನೀಡಿ ಗೌರವಿಸಿದರು.

ಆರಾಧ್ಯರು ಸಾಹಿತ್ಯ ಕ್ಷೇತ್ರದಲ್ಲಿ ಸಲ್ಲಿಸಿದ ಅನುಪಮ ಸೇವೆಯನ್ನು ಗಮನಿಸಿದ ಅನೇಕ ಮಠಗಳು ಅವರಿಗೆ ಬಂಗಾರದ ಪದಕ ನೀಡಿ ಗೌರವಿಸಿವೆ. 'ಸಾಹಿತ್ಯ ವಿಶಾರದಾ', 'ಶಿವತತ್ತ್ವ ಚಿಂತಾರತ್ನ', 'ವಿದ್ಯಾವಾರಧಿ', 'ಸಾಹಿತ್ಯರತ್ನ', 'ವ್ಯಾಖ್ಯಾನ ವಿಚಕ್ಷಣ', 'ಶಿವಾದ್ವೈತ ಭೂಷಣ' ಮೊದಲಾದ ಬಿರುದುಗಳನ್ನು ನೀಡಿವೆ. ಅಲ್ಲದೆ ಅನೇಕ ಸಂಘ ಸಂಸ್ಥೆಗಳು ಸನ್ಮಾನ ಮಾಡಿವೆ. ಕೇಂದ್ರ ಸರ್ಕಾರದಿಂದ 'ಆದರ್ಶ ಶಿಕ್ಷಕ ರಾಷ್ಟ್ರ ಪ್ರಶಸ್ತಿ' (೧೯೮೬), ಕರ್ನಾಟಕ ಸರ್ಕಾರ 'ರಾಜ್ಯೋತ್ಸವ ಪ್ರಶಸ್ತಿ'ಗಳಿಗೆ ಭಾಜನರಾಗಿದ್ದಾರೆ.

'ಮಾಣಿಕ್ಯಾ ಸಮಲಂ ಕರೋತಿ ಪುರುಷಂ ಯಾ ಸಂಸ್ಕೃತಾ ಧಾರ್ಯತೆ' ಎಂದು ಭರ್ತೃಹರಿ ಹೇಳಿದ್ದಾನೆ. ಮಾನವನಲ್ಲಿ ಸಂಸ್ಕೃತಿಯನ್ನು ಪ್ರತಿಧ್ವನಿಸುವ ಸಾಧನೆ ಅವನು ಗಳಿಸಿದ ಸ್ಥಾನ, ಜ್ಞಾನಿಯು ತಾನು ಗಳಿಸಿದ ಜ್ಞಾನವನ್ನು ತನ್ನ ಪರಂಪರೆಗೆ ದಾನ ಮಾಡಿದರೆ ಅವನು ಅಮರನೇ ಆಗುತ್ತಾನೆ. ಜ್ಞಾನದಲ್ಲಿ ಅಂತಹ ಸತ್ವವಿದೆ. ಅಂತಹ ಜ್ಞಾನವನ್ನು ಪರಿಶ್ರಮದಿಂದ ತಮ್ಮದಾಗಿಸಿಕೊಂಡು ಹಲವಾರು ಮೌಲಿಕ ಕೃತಿಗಳನ್ನು ಕೊಡುಗೆಯಾಗಿ ಕೊಡುವುದರ ಮೂಲಕ ನಂಜುಂಡಾರಾಧ್ಯರು ಅಮರರಾಗಿದ್ದಾರೆ.

ನಮ್ಮ ನಾಡಿನ ಹಿರಿಯ ವಿದ್ವಾಂಸರಾದ ಡಾ. ಎಚ್. ತಿಪ್ಪೇರುದ್ರಸ್ವಾಮಿಗಳವರು ಹೇಳಿರುವ ಮಾತುಗಳು ಎಂ.ಜಿ. ನಂಜುಂಡಾರಾಧ್ಯರ ಘನವ್ಯಕ್ತಿತ್ವವನ್ನು ಅನಾವರಣ ಮಾಡಿದಂತಾಗಿದೆ.

"ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯ ಅವರನ್ನು ಸ್ಮರಿಸಿಕೊಂಡಾಗಲೆಲ್ಲಾ ವಿದ್ವತ್ತಿನ ಔನ್ನತ್ಯದ ಜೊತೆಗೆ ಸೌಜನ್ಯ ಸಹೃದಯತೆಗಳ ಸ್ನೇಹಮೂರ್ತಿಯೊಂದು ಕಣ್ಣಮುಂದೆ ನಿಲ್ಲುತ್ತದೆ. ಅವರ ವ್ಯಕ್ತಿತ್ವವೇ ಅಂತಹದು. ಸಂಸ್ಕೃತ, ಕನ್ನಡಗಳಲ್ಲಿ ಪ್ರಗಲ್ಭಪಾಂಡಿತ್ಯ; ಸಂಸ್ಕೃತ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದು ತಮ್ಮ ಪ್ರೌಢ ಪ್ರವಚನಗಳಿಂದಲೂ ಗಮನ ಸೆಳೆಯುವ ಸಿದ್ಧಾಂತ ಪ್ರತಿಪಾದನೆಯ ಶಿಸ್ತು; ಇದರ ಜೊತೆಗೆ ಪರಿಶುದ್ಧ ಜೀವನದ ನಿಷ್ಠಾವಂತ ಆಚರಣೆಯ ನಿಯಮಬದ್ಧ ಜೀವನ, ಇವುಗಳಿಂದ ಸಹಜವಾಗಿ ಬೆಳೆಯಬಹುದಾದ ಅಹಂಕಾರಕ್ಕೆ ಎಡೆಗೊಡದ ಸರಸ ಸಜ್ಜನಿಕೆಯ ಸರಳತೆ, ಈ ಮೂರು ಒಂದಾಗಿ ಕಂಡೊಡನೆ ಗೌರವವನ್ನು ಮೂಡಿಸುವಂತಹ ಆಕರ್ಷಕ ವ್ಯಕ್ತಿತ್ವ ಅವರದಾಗಿತ್ತು. ಅವರ ವಿದ್ವತ್ತಿನ ಗುಣವೆಂದರೆ, ಶುಷ್ಕ ಪಾಂಡಿತ್ಯವಾಗಿರಲಿಲ್ಲ. ವಿಷಯದ ಪ್ರೌಢಿಮೆಯ ಜೊತೆಗೆ ನಿರೂಪಣೆಯ ಪರಿಣತಿಯೂ ಸೇರಿ ಅವರ ಶಾಸ್ತ್ರ ಗ್ರಂಥಗಳು ಜಡವಾಗದೆ ಕುತೂಹಲದಿಂದ ಓದಿಸಿಕೊಳ್ಳುತ್ತವೆ. ಪಾಂಡಿತ್ಯದ ಜೊತೆಗೆ ಸೃಜನಾತ್ಮಕ ಕೃತಿಗಳನ್ನು ಅವರು ರಚಿಸುವುದುನ್ನು ಗಮನಿಸಬಹುದು."

ಒಬ್ಬ ಶ್ರೇಷ್ಠ ವಿದ್ವಾಂಸರು ಮತ್ತೊಬ್ಬ ಶ್ರೇಷ್ಠ ವಿದ್ವಾಂಸರನ್ನು ಕುರಿತು ಹೇಳಿರುವ ಮಾತುಗಳು ಮಹತ್ವವೆನಿಸಿವೆ. ಇದರಿಂದ ಡಾ. ಎಚ್. ತಿಪ್ಪೇರುದ್ರಸ್ವಾಮಿ ಅವರ ಹೃದಯ ಶ್ರೀಮಂತಿಕೆಯ ಪರಿಚಯವಾಗುತ್ತದೆ.

ಸಾಹಿತ್ಯ, ಸಂಸ್ಕೃತಿಗಳಿಗೆ ಅಮೂಲ್ಯ ಕೊಡುಗೆ ನೀಡಿದ ಎಂ.ಜಿ. ನಂಜುಂಡಾರಾಧ್ಯರು ನವೆಂಬರ್ ೭, ೧೯೮೯ ರಂದು ಲಿಂಗೈಕ್ಯರಾದರು. ಭೌತಿಕವಾಗಿ ಅವರು ಇಂದು ನಮ್ಮ ಕಣ್ಣಮುಂದೆ ಇಲ್ಲದೆ ಹೋದರೂ ಅವರ ಬಿಟ್ಟುಹೋದ, ಕೊಟ್ಟುಹೋದ ಸಾಹಿತ್ಯ ಸಂಪತ್ತು ವೃದ್ಧಿಸುತ್ತಲೇ ಇರುತ್ತದೆ.



ವರದಿ

# ಸಂಸ್ಕೃತ ವಿದ್ವಾಂಸ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶರವರಿಗೆ ಎಪ್ಪತ್ತರ ಅಭಿನಂದನೆ

ಹಿರಿಯ ಸಂಸ್ಕೃತ ವಿದ್ವಾಂಸ, ಸಂಸ್ಕೃತ ವಿಶ್ವವಿದ್ಯಾಲಯದ ನಿಕಟಪೂರ್ವ ಕುಲಪತಿಗಳಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರಿಗೆ ಎಪ್ಪತ್ತು ತುಂಬಿದ ಶುಭ ಸಂದರ್ಭದಲ್ಲಿ ಅವರ ಶಿಷ್ಯರು, ಅಭಿಮಾನಿಗಳು ಏರ್ಪಡಿಸಿದ್ದ ಸಮಾರಂಭ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಜೂನ್ ೫ ರಂದು ಬೆಂಗಳೂರಿನಲ್ಲಿ ನಡೆಯಿತು.

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಮಂಗಳ ನುಡಿಗಳಲ್ಲಿ "ಮಲ್ಲೇಪುರಂ ಅವರು ಸಿದ್ಧಗಂಗಾ ಮಠದಲ್ಲಿ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರು ಹಚ್ಚಿದ ಜ್ಯೋತಿಯಲ್ಲಿ ಅತ್ಯಂತ ಪ್ರಖರವಾಗಿ ಬೆಳಗುತ್ತಿರುವ ಅವರು; ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ ಅವರ ಸಾಲಿನಲ್ಲಿ ನಿಲ್ಲುವ ವ್ಯಕ್ತಿತ್ವ ಹೊಂದಿದ್ದಾರೆ. ಬಾಲ್ಯದಿಂದಲೇ ಓದುವ ಹವ್ಯಾಸ ಬೆಳೆಸಿಕೊಂಡಿರುವ ಮಲ್ಲೇಪುರಂ ಅವರು ಮಠದ ಗ್ರಂಥಾಲಯದಲ್ಲಿರುವ ಬಹುತೇಕ ಕೃತಿಗಳನ್ನು ಓದಿರುವ ಏಕೈಕ ವ್ಯಕ್ತಿ. ಹಾಗಾಗಿ ಅವರು ಇಷ್ಟು ಎತ್ತರದ ಸಾಧನೆ ಮಾಡಲು ಸಾಧ್ಯವಾಯಿತು" ಎಂದು ಹೇಳಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಸರ್ವೋಚ್ಚ ನ್ಯಾಯಾಲಯದ ವಿಶ್ರಾಂತ ನ್ಯಾಯಮೂರ್ತಿ ಡಾ. ಶಿವರಾಜ ವಿ. ಪಾಟೀಲ ಅವರು ತಮ್ಮ ಅಧ್ಯಕ್ಷೀಯ ನುಡಿಗಳಲ್ಲಿ "ಆಚಾರ್ಯ, ಪ್ರಾಚಾರ್ಯ, ಸಾಹಿತಿ, ಚಿಂತಕ, ಮಾರ್ಗದರ್ಶಕರೂ ಆಗಿರುವ ಮಲ್ಲೇಪುರಂ ಅವರನ್ನು ನೋಡಿದಾಗ ಒಬ್ಬ ವ್ಯಕ್ತಿ ಇಷ್ಟೆಲ್ಲ ರೀತಿಯಲ್ಲಿ ಜೀವನ ಸಾಗಿಸಲು ಸಾಧ್ಯವೇ ಎಂಬ ಪ್ರಶ್ನೆ ಮೂಡುತ್ತದೆ. ಜಗತ್ತಿನಲ್ಲಿ ನಾನಾ ವಿಧದ ಪ್ರಶಸ್ತಿಗಳಿವೆ. ಆದರೆ ಅವೆಲ್ಲವನ್ನೂ ಮೀರಿದ ಶ್ರೇಷ್ಠ ಪ್ರಶಸ್ತಿ 'ಉತ್ತಮ ಮನುಷ್ಯ' ಎಂಬುದು. ತಮ್ಮ ಪಾಂಡಿತ್ಯ, ಗುಣಸ್ವಭಾವದ ಮೂಲಕ ಮಲ್ಲೇಪುರಂ ಅವರು ಪ್ರಶಸ್ತಿ ಪ್ರಶಸ್ತಿಗಳಿಗೂ ಪ್ರಶಸ್ತಿಯಾಗಿದ್ದಾರೆ" ಎಂದು ಪ್ರಶಂಸಿಸಿದರು.

ಡಾ. ಮೂಡ್ನಾಕೂಡು? ಡಾ. ಮೂಡೇ ಪಿ. ಕೃಷ್ಣ ಸಂಪಾದಕತ್ವದ "ಸಮಾಹಿತ" ಹಾಗೂ ಪ್ರೊ. ಮಲ್ಲೇಪುರಂ ಅವರ 'ಸಪ್ತತಿ' ಗ್ರಂಥಗಳನ್ನು ಲೋಕಾರ್ಪಣೆ ಮಾಡಿದ ಜ್ಞಾನಪೀಠ ಪುರಸ್ಕೃತರೂ, ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರೂ, ಆದ ಡಾ. ಚಂದ್ರಶೇಖರ ಕಂಬಾರ ಅವರು ಮಾತನಾಡಿ

"ಭಾರತದಲ್ಲಿ ಶಾಸ್ತ್ರಕ್ಕಾಗಿ ಬಳಸಿಕೊಳ್ಳಲಾಗಿರುವ ಏಕೈಕ ಭಾಷೆ ಸಂಸ್ಕೃತ. ಈ ಭಾಷೆಯ ಕೀಲಿಕೈ ಮಲ್ಲೇಪುರಂ ಅವರಿಗೆ ಚೆನ್ನಾಗಿ ತಿಳಿದಿದೆ. ಇದುವರೆಗೂ ಯಾರಿಗೂ ಅನುವಾದಿಸಲು ಸಾಧ್ಯವಾಗದಂತಹ ಗ್ರಂಥಗಳನ್ನು ಅನುವಾದಿಸಿ ಕನ್ನಡ ಸಾಹಿತ್ಯವನ್ನು ಶ್ರೀಮಂತ ಗೊಳಿಸಿದ್ದಾರೆ" ಎಂದು ಶ್ಲಾಘಿಸಿದರು.

ಖ್ಯಾತ ಲೇಖಕಿ, ಆಧ್ಯಾತ್ಮ ಚಿಂತಕಿ ಡಾ. ವೀಣಾ ಬನ್ನಂಜೆ ಅವರು ಅಭಿನಂದನಾ ನುಡಿಗಳನ್ನಾಡಿದರು. ಮುಖ್ಯ ಅತಿಥಿಗಳಾಗಿ ಒಡಿಸಾದ ಕೇಂದ್ರೀಯ ವಿಶ್ವವಿದ್ಯಾಲಯದ ಸಹ ಕುಲಪತಿ ಪ್ರೊ. ಪಿ.ವಿ. ಕೃಷ್ಣಭಟ್ಟ ಹಾಗೂ ಉಚ್ಚನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿ ಶ್ರೀ ಎನ್. ಕುಮಾರ್ ಅವರು ಭಾಗವಹಿಸಿದ್ದರು. ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ದಂಪತಿಗಳನ್ನು ಸನ್ಮಾನಿಸಲಾಯಿತು.

ಅಭಿನಂದನೆ ಸ್ವೀಕರಿಸಿ, ಕೃತಜ್ಞತಾ ನುಡಿಗಳನ್ನಾಡಿದ ಪ್ರೊ. ಮಲ್ಲೇಪುರಂ ಅವರು "ಸಿದ್ಧಗಂಗಾ ಮಠದ ಶ್ರೀ ಶಿವಕುಮಾರಸ್ವಾಮೀಜಿ ಅವರ ಆಶೀರ್ವಾದದಿಂದ ನಾನು ಈ ಸ್ಥಾನಕ್ಕೆ ಬರಲು ಸಾಧ್ಯವಾಯಿತು. ಮಠಕ್ಕೆ ಹೋಗದಿದ್ದರೆ ನಾನು ಸಾಮಾನ್ಯ ರೈತನಾಗಿ ಇರಬೇಕಾಗಿತ್ತು. ಮಠದ ಸಂಪರ್ಕದಿಂದಾಗಿ ನನಗೆ ಬದುಕಿನಲ್ಲಿ ಅನೇಕ ಗುರು-ಹಿರಿಯರು ಹಾಗೂ ಸಾಧು-ಸಂತರ ಮಾರ್ಗದರ್ಶನ ದೊರೆಯಿತು. ಅದರಿಂದಾಗಿ ಸಮಾಜದಲ್ಲಿ ನನಗೆ ಸ್ವಲ್ಪಮಟ್ಟಿಗಾದರೂ ಕೆಲಸ ಮಾಡಲು ಸಾಧ್ಯವಾಯಿತು. ಸಾಹಿತ್ಯದ ಮೂಲಕ ಆತ್ಮಶುದ್ಧಿ ಮಾಡಿಕೊಳ್ಳಲು ದಾರಿಯಾಯಿತು" ಎಂದು ತಮ್ಮ ಮನದಾಳದ ಭಾವನೆಗಳನ್ನು ಹಂಚಿಕೊಂಡರು.

ಸಮಾರಂಭದ ಅಂಗವಾಗಿ ಸಾಂಸ್ಕೃತಿಕ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಶ್ರೀ ಜಿ. ಕೃಷ್ಣಮೂರ್ತಿ, ನೆಲಮಂಗಲ ಮತ್ತು ತಂಡದವರಿಂದ ರಂಗ ಗೀತೆಗಳು, ವಿದ್ವಾನ್ ಖಾಸಿಂ ಮಲ್ಲಿಗೆ ಮಾಡುವ ಅವರಿಂದ ಶಾಸ್ತ್ರೀಯ ಗಾಯನ ನಡೆಯಿತು. ಇದೇ ಸಂದರ್ಭದಲ್ಲಿ ಶ್ರೀ ಅಮರನಾರಾಯಣ ನಿರ್ಮಿಸಿದ ಪ್ರೊ. ಮಲ್ಲೇಪುರಂ ಸಾಕ್ಷ್ಯಚಿತ್ರ ಪ್ರದರ್ಶನ ನಡೆಯಿತು. ಪ್ರಾರಂಭದಲ್ಲಿ ಅಭಿನಂದನ ಸಮಿತಿಯ ಅಧ್ಯಕ್ಷರಾದ ಡಾ. ಕೆ.ಜಿ. ಲಕ್ಷ್ಮೀನಾರಾಯಣಪ್ಪ ಅವರು ಸ್ವಾಗತ ಹಾಗೂ ಪ್ರಾಸ್ತಾವಿಕ ನುಡಿಗಳನ್ನಾಡಿದರು.

ಜೂನ್ ೧೪ ರಂದು ಗುಂಡ್ಲುಪೇಟೆ ತಾಲ್ಲೂಕಿನ ಕಬ್ಬಹಳ್ಳಿ ಮಠದ ಲಿಂಗೈಕ್ಯ ಷ.ಬ. ಶ್ರೀ ಚನ್ನಬಸವ ಸ್ವಾಮಿಗಳವರ ಶಿವಗಣಾರಾಧನೆ ಮತ್ತು ಧಾರ್ಮಿಕ ಸಭೆ ಕಾರ್ಯಕ್ರಮದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು, ಶ್ರೀ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ನೆರವೇರಿತು. ಈ ಸಂದರ್ಭದಲ್ಲಿ ಪಡಗೂರು ಮಠದ ಪರಮಪೂಜ್ಯ ಶ್ರೀಗಳು, ಕಬ್ಬಹಳ್ಳಿ ಶ್ರೀಗಳು, ಮಾದಹಳ್ಳಿ ಮಠದ ಶ್ರೀಗಳು, ಹರವೆಮಠದ ಶ್ರೀಗಳು, ದೇವನೂರುಮಠದ ಶ್ರೀಗಳು, ಮೂಡಗೂರು ಮಠದ ಶ್ರೀಗಳು, ಮಾದಪಟ್ಟಣ ಮಠದ ಶ್ರೀಗಳು, ಕುದೇರುಮಠದ ಶ್ರೀಗಳು, ಚಾಮರಾಜನಗರ ಸಿದ್ಧಮಲ್ಲೇಶ್ವರ ವಿರಕ್ತಮಠದ ಶ್ರೀಗಳು, ಹಂಗ್ರಾಪುರ ಮಠದ ಶ್ರೀಗಳು ಉಪಸ್ಥಿತರಿದ್ದರು.



ಶ್ರದ್ಧಾಂಜಲಿ

# ಪ್ರೊ. ಡಿ. ಚಂದ್ರಪ್ಪನವರು ವಿಧಿವಶ

ಶ್ರೀ ಸಿದ್ಧಗಂಗಾ ವಿಜ್ಞಾನ, ಕಲೆ, ವಾಣಿಜ್ಯ ಪ್ರಥಮ ದರ್ಜೆ ಕಾಲೇಜಿನಲ್ಲಿ ೩೦ ವರ್ಷಗಳ ಕಾಲ ಕನ್ನಡ ವಿಭಾಗದ ಉಪನ್ಯಾಸಕರಾಗಿ, ಪ್ರಾಧ್ಯಾಪಕರಾಗಿ, ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದ ಪ್ರೊ. ಡಿ. ಚಂದ್ರಪ್ಪನವರು ಕನ್ನಡ ನಾಡು ನುಡಿಯ ಬಗ್ಗೆ ಅಪಾರ ಪ್ರೀತಿ, ಗೌರವ, ಕಳಕಳಿಯನ್ನು ಹೊಂದಿದ್ದರು. ತುಮಕೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಹಲವಾರು ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಸಾಕಾರಗೊಳಿದ್ದರು. ಸೃಜನಶೀಲ ಲೇಖಕರಾಗಿದ್ದ ಪ್ರೊ. ಡಿ. ಚಂದ್ರಪ್ಪನವರು ಹಲವಾರು ಕೃತಿಗಳ ಸಂಪಾದಕರಾಗಿದ್ದರು. ಶ್ರೀ ಸಿದ್ಧಗಂಗಾ ಮಾಸಪತ್ರಿಕೆಯ ಸಹ ಸಂಪಾದಕರಾಗಿಯೂ ಸೇವೆ ಸಲ್ಲಿಸಿದ್ದರು. ಉತ್ತಮ ಸಂಘಟಕರೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದು, ವಿವಿಧ ಸಂಘ ಸಂಸ್ಥೆಗಳ ವಿವಿಧ ಹುದ್ದೆಗಳಲ್ಲಿ ಕ್ರಿಯಾಶೀಲರಾಗಿ ಸೇವೆ ಸಲ್ಲಿಸಿದ್ದರು. ಸದಾ ಚಟುವಟಿಕೆಯಿಂದ ಇರುತ್ತಿದ್ದ ಶ್ರೀ ಚಂದ್ರಪ್ಪನವರು ಕನ್ನಡ ನಾಡು ನುಡಿಗೆ ಸಂಬಂಧಿಸಿದಂತೆ ತಮ್ಮದೇ ಆದ ಕನಸು ಕಂಡಿದ್ದರು. ಆ ಕನಸುಗಳು ನನಸಾಗುವ ಮುನ್ನವೇ ಜೂನ್ ೮ ರಂದು ವಿಧಿಯ ಕರೆಗೆ ಓಗೊಟ್ಟು ಈ ಲೋಕದಿಂದ ನಿರ್ಗಮಿಸಿದರು.

**ಜನನ :** ತುಮಕೂರು ಜಿಲ್ಲೆ, ಗುಬ್ಬಿ ತಾಲ್ಲೂಕು ತಿಪ್ಪೂರು ಪಾಳ್ಯದಲ್ಲಿ ಜೂನ್ ೬, ೧೯೪೭ ರಂದು ತಂದೆ ದೊಡ್ಡಯ್ಯ, ತಾಯಿ ಶ್ರೀಮತಿ ಸಿದ್ಧರಾಮಕ್ಕ ಪುತ್ರರಾಗಿ ಜನಿಸಿದರು. ಅವರದು ಸುಸಂಸ್ಕೃತ ಕೃಷಿ ಕುಟುಂಬ. ಅಮ್ಮನಘಟ್ಟ ಸರ್ಕಾರಿ ಶಾಲೆಯಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು, ಗುಬ್ಬಿ ಮುನಿಸಿಪಲ್ ಹೈಸ್ಕೂಲ್‌ನಲ್ಲಿ ಪ್ರೌಢ ಶಿಕ್ಷಣವನ್ನು, ತುಮಕೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಪದವಿ ಶಿಕ್ಷಣವನ್ನು ಮುಗಿಸಿದ ಶ್ರೀ ಡಿ. ಚಂದ್ರಪ್ಪನವರು ಎನ್.ಸಿ.ಸಿ.ಯಲ್ಲಿ ವಿಶೇಷ ಆಸಕ್ತಿ, ಒಲವು ಹೊಂದಿದ್ದು ರಾಜ್ಯ ಹಾಗೂ ರಾಷ್ಟ್ರಮಟ್ಟದ ಶಿಬಿರಗಳಲ್ಲಿ ಭಾಗವಹಿಸಿ ಶ್ರದ್ಧೆ, ನಿಷ್ಠೆ, ಭಾವೈಕ್ಯತೆಯ ಗುಣಗಳನ್ನು ಮೈಗೂಡಿಸಿಕೊಂಡರು. ಹೆಚ್ಚಿನ ಜ್ಞಾನಾರ್ಜನೆ ಮಾಡಬೇಕೆಂಬ ಆಸಕ್ತಿ, ಬಯಕೆಯಿಂದ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಸ್ನಾತಕೋತ್ತರ ಪದವೀಧರರಾಗಿ ಹೊರಬಂದರು.

**ವಿವಿಧ ಸಂಘ ಸಂಸ್ಥೆಗಳಲ್ಲಿ :** ಪ್ರೊ. ಡಿ. ಚಂದ್ರಪ್ಪನವರು ಕ್ರಿಯಾಶೀಲತೆಯನ್ನೇ ಹಾಸಿ ಹೊದ್ದವರು. ಒಬ್ಬ ಉತ್ತಮ ಸಹೃದಯಿ ಸಂಘಟಕರಾಗಿದ್ದರು. ಬೆಂಗಳೂರು ಮೈಸೂರು ವಿಶ್ವವಿದ್ಯಾಲಯದ ಪರೀಕ್ಷಾ ಮಂಡಳಿ ಸದಸ್ಯರಾಗಿ, ಬೆಂಗಳೂರು ವಿ.ವಿ.ಯ ಅಕಾಡೆಮಿಕ ಕೌನ್ಸಿಲ್ ಚುನಾಯಿತ ಸದಸ್ಯರಾಗಿ ಸೇವೆ ಸಲ್ಲಿಸಿದ್ದರು. ನಿಟ್ಟೂರಿನಲ್ಲಿ ಶ್ರೀ ಸಿದ್ಧಶ್ರೀ ವಿದ್ಯಾ ಸಂಸ್ಥೆಯನ್ನು ಸ್ಥಾಪಿಸಿ ಅದರ ಸಂಸ್ಥಾಪಕ ಕಾರ್ಯದರ್ಶಿಯಾಗಿ ಆ ಸಂಸ್ಥೆಯನ್ನು ಬೆಳೆಸಿದ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ಬೆಂಗಳೂರು ವಿ.ವಿ.ಯ ಕಾಲೇಜು ಅಧ್ಯಾಪಕರ ಒಕ್ಕೂಟದ ಸಂಸ್ಥಾಪಕ ಅಧ್ಯಕ್ಷರಾಗಿ ಸುಮಾರು ಎಂಟು ವರ್ಷಗಳ ಕಾಲ ಅಮೂಲ್ಯ ಸೇವೆ ಸಲ್ಲಿಸಿ ಒಕ್ಕೂಟದ ಸರ್ವತೋಮುಖ ಅಭಿವೃದ್ಧಿಗೆ ಕಾರಣರಾಗಿದ್ದರು. ಅನೇಕ ಸಂಘಟನೆಗಳಲ್ಲಿ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಆಯಾ ಹುದ್ದೆಗಳಿಗೆ ಘನತೆ ಗೌರವವನ್ನು ತಂದುಕೊಟ್ಟಿದ್ದರು.

**ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾಗಿ :** ಕನ್ನಡ ನಾಡು-ನುಡಿ, ಕಲೆ-ಸಂಸ್ಕೃತಿಯ ಬಗ್ಗೆ ಅಪಾರವಾದ ಆಸಕ್ತಿ, ಕಳಕಳಿ, ಬದ್ಧತೆಯನ್ನು ಹೊಂದಿದ್ದ ಪ್ರೊ. ಡಿ. ಚಂದ್ರಪ್ಪನವರು ತುಮಕೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಕೋಶಾಧ್ಯಕ್ಷರಾಗಿ, ಅಧ್ಯಕ್ಷರಾಗಿ ಸದಾಕಾಲ ನೆನಪಿನಲ್ಲಿ ಉಳಿಯುವಂತಹ ಕಾರ್ಯಕ್ರಮಗಳನ್ನು ರೂಪಿಸಿ ತಮ್ಮ ಅಧಿಕಾರಾವಧಿಯಲ್ಲಿ ಹಂತ ಹಂತವಾಗಿ ಅನುಷ್ಠಾನಗೊಳಿಸಿದ್ದರು. ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಸಾಹಿತ್ಯ

ಸಮ್ಮೇಳನಗಳನ್ನು ನಡೆಸುವುದರ ಜೊತೆಗೆ ಸಾಹಿತ್ಯ ಪರಿಷತ್ ಭವನ, ಗ್ರಂಥ ಭಂಡಾರ, ಜಿಲ್ಲಾ ಅಧ್ಯಕ್ಷರುಗಳು ಹಾಗೂ ಜಿಲ್ಲಾ ಸಮ್ಮೇಳನಾಧ್ಯಕ್ಷರ ಭಾವಚಿತ್ರಗಳ ಅನಾವರಣ, ಜಿಲ್ಲಾ ಹಾಗೂ ತಾಲ್ಲೂಕು ಅಧ್ಯಕ್ಷರುಗಳ ಕಿರುಪರಿಚಯ, ಜಿಲ್ಲೆಯಾದ್ಯಂತ ಪುಸ್ತಕ ಮಾರಾಟದ ವ್ಯವಸ್ಥೆ, ಇವೇ ಮೊದಲಾದ ಯೋಜನೆಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಸಾಕಾರಗೊಳಿಸಿದ್ದರು.

**ವಿವಿಧ ಸಂಘ ಸಂಸ್ಥೆಗಳಿಂದ ಸನ್ಮಾನ :** ಕನ್ನಡ ನಾಡು-ನುಡಿಗೆ ಸಲ್ಲಿಸಿದ ಅನುಪಮ ಸೇವೆಗಾಗಿ ಗುಬ್ಬಿ ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷತೆ ಗೌರವ, ತುಮಕೂರು ರೋಟರಿಯವರಿಂದ 'ಉತ್ತಮ ಶಿಕ್ಷಕ' ಪ್ರಶಸ್ತಿ. ರಾಜರಾಜೇಶ್ವರಿ ನೃತ್ಯಕಲಾ ಮಂದಿರ ಟ್ರಸ್ಟ್ ವತಿಯಿಂದ 'ಪ್ರತಿಭಾ ಪ್ರಶಸ್ತಿ', ಬೆಂಗಳೂರು ಶಿಷ್ಯಾಭಿಮಾನಿಗಳಿಂದ 'ಜ್ಞಾನ ಸಂಜೀವಿನಿ' ಪ್ರಶಸ್ತಿಗೆ ಭಾಜನರಾಗಿದ್ದರು. ಅಲ್ಲದೆ ಬೆಂಗಳೂರು ವಿ.ವಿ. ಅಧ್ಯಾಪಕರ ಸಂಘ, ಅಧಿಚುಂಚನಗಿರಿ ವಿದ್ಯಾ ಸಂಸ್ಥೆಯೂ ಸೇರಿದಂತೆ ಅನೇಕ ವಿದ್ಯಾ ಸಂಸ್ಥೆಗಳು, ಸಂಘ ಸಂಸ್ಥೆಗಳು ಗೌರವಿಸಿವೆ.

**ಲೇಖಕ-ಸಂಪಾದಕರಾಗಿ :** ಚಿಗುರು, ನಿಜಶರಣ ಘಟ್ಟಿವಾಳಯ್ಯ, ಪ್ರೊ. ಟಿ.ಆರ್. ಮಹಾದೇವಯ್ಯ ಅವರ ಬದುಕು-ಬರಹ 'ನೆಲದ ಮರೆಯ ನಿಧಾನ', ಶ್ರೀ ಗುರು ಸಿದ್ಧರಾಮ ಶಿವಯೋಗಿಗಳ ಗದ್ದುಗೆಗಳು - ಒಂದು ಶೋಧ ಮೊದಲಾದ ಸ್ವತಂತ್ರ ಕೃತಿಗಳನ್ನು, ಜ್ಞಾನಗಂಗಾ, ಶಿವಯೋಗಿಶ್ರೀ, ಅಮರಸಿದ್ಧ, ರಸಗಂಗಾ, ಕಾವಿಯುಟ್ಟ ಗೊಮ್ಮಟ, ತವನಿಧಿ ಸಿದ್ಧರಾಮ, ಅಂಗೈಯಲ್ಲಿ ಅನುಭವ ಮೊದಲಾದ ಕೃತಿಗಳನ್ನು ಸಂಪಾದಿಸಿ ಕೊಟ್ಟಿದ್ದರು.

ಸರಳತೆ, ಸಜ್ಜನಿಕೆ, ಹೃದಯವಂತಿಕೆಯಿಂದ ಅಪಾರವಾದ ಅಭಿಮಾನಿಗಳ ಬಳಗವನ್ನು ಸಂಪಾದಿಸಿದ್ದ, ಕ್ರಿಯಾಶೀಲ ವ್ಯಕ್ತಿತ್ವದಿಂದ ಎಲ್ಲರೊಂದಿಗೆ ಒಡನಾಟವನ್ನೊಂದಿದ್ದ ಪ್ರೊ. ಡಿ. ಚಂದ್ರಪ್ಪನವರ ಅಗಲಿಕೆ ಸಾಹಿತ್ಯ, ಸಾಂಸ್ಕೃತಿಕ ಕ್ಷೇತ್ರಕ್ಕೆ ತುಂಬಲಾರದ ನಷ್ಟ. ಅವರ ಆತ್ಮಕ್ಕೆ ಚಿರಶಾಂತಿಯನ್ನು, ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಅವರ ಕುಟುಂಬದವರಿಗೆ, ಬಂಧು ಬಳಗದವರಿಗೆ ದಯಮಯನಾದ ಭಗವಂತ ಹಾಗೂ ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ ಎಂದು ಸಿದ್ಧಗಂಗಾ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.



ಜೂನ್ ೮ ರಂದು ಮಂಡ್ಯ ಜಿಲ್ಲೆ ಕೆರೆಗೋಡು ಹೋಬಳಿಯ ಆಲಕೆರೆಯಲ್ಲಿ ನಡೆದ ಬಸವ ಜಯಂತಿ ಸಮಾರಂಭ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು. ಸಮಾರಂಭದಲ್ಲಿ ಹರಗುರು ಚರಮೂರ್ತಿಗಳು, ಮಂಡ್ಯ ಶಾಸಕರಾದ ಎಂ. ಶ್ರೀನಿವಾಸ, ಕರ್ನಾಟಕ ಗ್ರಾಮೀಣ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ನಿಗಮದ ಅಧ್ಯಕ್ಷರಾದ ಶ್ರೀ ರುದ್ರೇಶ್ ಹಾಗೂ ಗ್ರಾಮಸ್ಥರು, ಭಕ್ತರು ಭಾಗವಹಿಸಿದ್ದರು.



ವರದಿ

# ಸಿದ್ಧಗಂಗಾ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ

### ಉಕ್ರೇನ್‌ನಿಂದ ಮರಳಿದ ವಿದ್ಯಾರ್ಥಿಗಳಿಗೆ ವೈದ್ಯಕೀಯ ನೆರವು:

ರಷ್ಯಾ-ಉಕ್ರೇನ್ ಯದ್ಧದ ಪರಿಣಾಮ ಉಕ್ರೇನ್‌ನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ವೈದ್ಯಕೀಯ ವಿದ್ಯಾರ್ಥಿಗಳನ್ನು ಸರ್ಕಾರ ಸುರಕ್ಷಿತವಾಗಿ ಕರೆತಂದಿದ್ದು ಅವರ ವಿದ್ಯಾಭ್ಯಾಸ ಮೊಟಕಾಗಬಾರದು ಎನ್ನುವ ಉದ್ದೇಶದಿಂದ ಸಿದ್ಧಗಂಗಾ ಮೆಡಿಕಲ್ ಕಾಲೇಜಿನಲ್ಲಿ ಶಿಕ್ಷಣ ಮುಂದುವರೆಸಲು ಅವಕಾಶ ನೀಡಲಾಗಿದೆ ಎಂದು ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮೀಜಿ ಯವರು ತಿಳಿಸಿದರು.



ಸಿದ್ಧಗಂಗಾ ಮಠದಲ್ಲಿ ಮಾತನಾಡಿದ ಪೂಜ್ಯ ಶ್ರೀಗಳವರು ಭಾರತಕ್ಕೆ ಮರಳಿರುವ ತುಮಕೂರಿನ ವೈದ್ಯಕೀಯ ವಿದ್ಯಾರ್ಥಿಗಳಿಗೆ ನಮ್ಮ ಮೆಡಿಕಲ್ ಕಾಲೇಜಿನಲ್ಲಿ ಪ್ರಾಕ್ಟಿಕಲ್, ಲೈಬ್ರರಿ ಸೇರಿದಂತೆ ಅಗತ್ಯ ನೆರವು ನೀಡಿ ಕ್ಲಿನಿಕಲ್ ಸಪೋರ್ಟ್ ಸಿಗುವಂತೆ ಮಾಡಿದ್ದು ಮುಂದಿನ ವೈದ್ಯಕೀಯ ಪರೀಕ್ಷೆಗಳ ಬಗ್ಗೆ ಸರ್ಕಾರ ನಿರ್ಧರಿಸಬೇಕಿದೆ ಎಂದರು.

ಎಸ್‌ಎಂಸಿಆರ್‌ಐ ನಿರ್ದೇಶಕ ಡಾ.ಎಸ್.ಪರಮೇಶ್ ಪತ್ರಕರ್ತರೊಂದಿಗೆ ಮಾತನಾಡಿ ನಮ್ಮ ಜಿಲ್ಲೆಯಿಂದ ಒಟ್ಟು ೨೭ ವಿದ್ಯಾರ್ಥಿಗಳು ಉಕ್ರೇನ್ ನಲ್ಲಿ ವೈದ್ಯಕೀಯ ಶಿಕ್ಷಣ ಪಡೆಯುತ್ತಿದ್ದು ಅದರಲ್ಲಿ ನಮ್ಮಲ್ಲಿಗೆ ಆಗಮಿಸಿರುವ ೧೬ ಜನ ವಿದ್ಯಾರ್ಥಿಗಳಿಗೆ ಸದ್ಯ ಪ್ರಾಕ್ಟಿಕಲ್ ತರಬೇತಿ ನೀಡಲಾಗುತ್ತಿದೆ. ಯಾವುದೇ ರೀತಿಯ ವೈದ್ಯಕೀಯ ವೆಚ್ಚವನ್ನು ಪಡೆಯದೆ ಉಚಿತ ಶಿಕ್ಷಣ ನೀಡುತ್ತಿದ್ದೇವೆ. ಮೆಡಿಕಲ್ ಕಾಲೇಜಿನ ಪ್ರಾಂಶುಪಾಲರಾದ ಡಾ.ಶಾಲಿನಿ ಎಂ.ರವರು ಖುದ್ದು ವಿದ್ಯಾರ್ಥಿಗಳಿಗೆ ಪ್ರಾಕ್ಟಿಕಲ್ ತರಗತಿಗಳನ್ನು ನಡೆಸಿಕೊಡುತ್ತಿದ್ದು ಉಕ್ರೇನ್‌ನಿಂದ ಥಿಯರಿ ಶಿಕ್ಷಣ ಹಾಗೂ ಆಸ್ಪತ್ರೆಯಲ್ಲಿ ಪ್ರಾಕ್ಟಿಕಲ್ ಪಡೆಯುತ್ತಿದ್ದಾರೆ ಎಂದರು.

ವಿದ್ಯಾರ್ಥಿನಿ ರೂಪಶ್ರೀ ಮಾತನಾಡಿ ಸಿದ್ಧಗಂಗಾ ಆಸ್ಪತ್ರೆ ನಮಗೆ ಮಾನಸಿಕ ಧೈರ್ಯತುಂಬಿ, ನಮ್ಮ ಎಲ್ಲಾ ಗೊಂದಲಗಳನ್ನು ಬಗೆ ಹರಿಸಿ ವೈದ್ಯಕೀಯ ತರಬೇತಿ ಮುಂದುವರೆಸಲು ಅವಕಾಶ ನೀಡುತ್ತಿದ್ದು, ಇಲ್ಲಿನ ವೈದ್ಯರು ರೋಗಿಗಳ ಸಂದರ್ಶನ, ಶಸ್ತ್ರಚಿಕಿತ್ಸೆ ಕೊಠಡಿಗಳಲ್ಲಿ ಅತ್ಯುತ್ತಮ ಮಾರ್ಗದರ್ಶನ ನೀಡುತ್ತಿದ್ದಾರೆ .ಮುಂದಿನ ಭವಿಷ್ಯದ ಬಗ್ಗೆ ಉಕ್ರೇನ್ ಹಾಗೂ ಭಾರತ ಸರ್ಕಾರದ ನಿರ್ಧಾರವನ್ನು ಎದುರುನೋಡುತ್ತಿದ್ದೇವೆ ಎಂದರು.

ಈ ಸಂದರ್ಭದಲ್ಲಿ ಎಸ್‌ಎಂಸಿ ಆರ್‌ಐ ಪ್ರಾಂಶುಪಾಲರಾದ ಡಾ.ಶಾಲಿನಿ ಎಂ, ಮೆಡಿಕಲ್ ಸೂಪರಿಂಟೆಂಡೆಂಟ್ ಡಾ.ನಿರಂಜನ್ ಮೂರ್ತಿ, ಸಿಇಓ ಡಾ.ಸಂಜೀವ್ ಕುಮಾರ್, ಪಿಆರ್‌ಓ ಕಾಂತರಾಜು ಉಪಸ್ಥಿತರಿದ್ದರು.



### ಸಿದ್ಧಗಂಗಾ ಆಸ್ಪತ್ರೆಯಲ್ಲಿ ನಡೆದ ಕಾರ್ಯಕ್ರಮಗಳು

**ದಾದಿಯರ ದಿನ :** ಮೇ ೧೨ ರಂದು ಸಿದ್ಧಗಂಗಾ ಆಸ್ಪತ್ರೆಯಲ್ಲಿ ಮಲಬಾರ್ ಗೋಲ್ಡ್ ಅಂಡ್ ಡೈಮಂಡ್ಸ್, ಮೈಕ್ರೋ ಲ್ಯಾಬ್ಸ್,ವತಿಯಿಂದ ಅಂತರಾಷ್ಟ್ರೀಯ ದಾದಿಯರ ದಿನವನ್ನು ಆಚರಿಸಲಾಯಿತು. ಸಿದ್ಧಗಂಗಾ ಮೆಡಿಕಲ್ ಕಾಲೇಜು ಹಾಗೂ ಸಂಶೋಧನಾ ಸಂಸ್ಥೆ ನಿರ್ದೇಶಕ ಡಾ.ಎಸ್.ಪರಮೇಶ್ ಕಾರ್ಯಕ್ರಮ ಉದ್ಘಾಟಿಸಿದರು. ಕಾಲೇಜಿನ





ಪ್ರಾಂಶುಪಾಲರಾದ ಡಾ.ಶಾಲಿನಿ ಎಂ.ರವರು ದಾದಿಯರ ದಿನದ ಮಹತ್ವ ಕುರಿತು ಮಾತನಾಡಿದರು. ಮೆಡಿಕಲ್ ಸೂಪರಿಂಟೆಂಡೆಂಟ್ ಡಾ.ನಿರಂಜನ ಮೂರ್ತಿ ಸಿದ್ಧಗಂಗಾ ಆಸ್ಪತ್ರೆ ನರ್ಸಿಂಗ್ ವಿಭಾಗದ ಮುಖ್ಯಸ್ಥರಾದ ನಾಗಣ್ಣ, ಮಲಬಾರ್ ಗೋಲ್ಡ್ ನ ಸ್ಟೋರ್ ಹೆಡ್ ಯೂಸಫ್ ಅಲಿ, ಮಾರ್ಕೆಟಿಂಗ್ ಮ್ಯಾನೇಜರ್ ಪ್ರೇಮ್ ಕುಮಾರ್, ಸೀನಿಯರ್ ಎಕ್ಸಿಕ್ಯುಟಿವ್ ಅಬ್ದುಲ್ ಖಾದರ್ ಸೇರಿದಂತೆ ಆಸ್ಪತ್ರೆ ಸಿಬ್ಬಂದಿ ಭಾಗವಹಿಸಿದ್ದರು.

## ನೂತನ ಅಡ್ವಾನ್ಸ್ ಎಕೋ ಮಿಷಿನ್‌ಗೆ ಪೂಜ್ಯರಿಂದ ಚಾಲನೆ



ಇತ್ತೀಚಿನ ದಿನಗಳಲ್ಲಿ ಹೃದ್ರೋಗದಿಂದ ಬಳಲುವವರ ಸಂಖ್ಯೆ ಹೆಚ್ಚುತ್ತಿದೆ ಇದನ್ನು ತಡೆಯುವ ನಿಟ್ಟಿನಲ್ಲಿ ಈಗಾಗಲೇ ಸಿದ್ಧಗಂಗಾ ಆಸ್ಪತ್ರೆ ಅತಿಹೆಚ್ಚು ಹೃದ್ರೋಗಿಗಳಿಗೆ ಚಿಕಿತ್ಸೆ ನೀಡುವ ಮೂಲಕ ವ್ಯಾಪಕ ಪ್ರಶಂಸೆಗೆ ಪಾತ್ರವಾಗಿದ್ದು ಇನ್ನೂ ಹೆಚ್ಚಿನ ಸೇವೆ ಸಲ್ಲಿಸಲು ನೂತನ ಅಡ್ವಾನ್ಸ್ ಎಕೋ ಮಿಷಿನ್ ಎಲ್ಲಾ ವಯೋಮಾನ ದವರಿಗೂ ಹೃದಯ ಪರೀಕ್ಷೆಗೆ ಅನುಕೂಲಕರವಾಗಲಿದೆ ಎಂದು ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಸಿದ್ಧಲಿಂಗ ಶ್ರೀಗಳವರು ತಿಳಿಸಿದರು.

ಅವರು ಸಿದ್ಧಗಂಗಾ ಆಸ್ಪತ್ರೆಯಲ್ಲಿ ನೂತನ ಅಡ್ವಾನ್ಸ್ ಎಕೋ ಮಿಷಿನ್ ಗೆ ಚಾಲನೆ ನೀಡಿ ಮಾತನಾಡಿದರು.

ಆಸ್ಪತ್ರೆ ನಿರ್ದೇಶಕ ಡಾ.ಎಸ್.ಪರಮೇಶ್ ಮಾತನಾಡಿ ಉತ್ತರ ಕರ್ನಾಟಕಕ್ಕೆ ಹೆಬ್ಬಾಗಿಲಾಗಿರುವ ತುಮಕೂರಿನಲ್ಲಿ ತುರ್ತು ಅಪಘಾತ ಹಾಗೂ ಹೃದಯಾಘಾತದಿಂದ ಜೀವಹಾನಿ ತಪ್ಪಿಸಲು ಸಿದ್ಧಗಂಗಾ ಆಸ್ಪತ್ರೆ ಕಾರ್ಯನಿರ್ಹಿಸುತ್ತಿದೆ. ಈಗ ಪರಿಚಯಿಸಿರುವ ನೂತನ ಎಕೋ ಮಿಷಿನ್ ಹೃದ್ರೋಗದ ಯಾವುದೇ ಅಪಾಯಗಳನ್ನು ತಡೆಯುವ ನಿಟ್ಟಿನಲ್ಲಿ ಹೆಚ್ಚಿನ ಸಹಕಾರ ನೀಡಲಿದೆ ಎಂದರು.

ಹಿರಿಯ ಹೃದ್ರೋಗ ತಜ್ಞ ಡಾ.ಹೆಚ್.ಎಂ.ಭಾನುಪ್ರಕಾಶ್ ಮಾತನಾಡಿ ನೂತನ ಅಡ್ವಾನ್ಸ್ ಎಕೋ ಮಿಷಿನ್‌ನಲ್ಲಿ ಹುಟ್ಟಿದ ಮಗುವಿನಿಂದ ಎಲ್ಲಾ ವಯೋಮಾನದವರ ಹೃದಯ ಪರೀಕ್ಷೆ ಮಾಡಲು ಸಾಧ್ಯವಾಗುತ್ತಿದೆ. ಎಂಡೋಸ್ಕೋಪಿ, ಎಕೋ ಮುಖಾಂತರ ಹೃದಯದ ಸಣ್ಣಪುಟ್ಟ ಸಮಸ್ಯೆಗಳು ಅಂದರೆ ಹೃದಯ ಹೆಪ್ಪುಗಟ್ಟುವುದು, ಕೀವು ,ಹೃದಯದ ರಂಧ್ರ ಸೇರಿದಂತೆ ಹೃದಯದ ಅತಿ ಅಪರೂಪದ ಖಾಯಿಲೆಗಳನ್ನೂ ಕೂಡ ಪರೀಕ್ಷಿಸಿ ಚಿಕಿತ್ಸೆ ನೀಡಬಹುದಾಗಿದ್ದು ತುಮಕೂರಿನಲ್ಲಿ ಇಂತಹ ಸೌಲಭ್ಯ ಹೊಂದಿರುವ ಏಕೈಕ ಆಸ್ಪತ್ರೆಯಾಗಿದೆ ಎಂದು ಹೇಳಿದರು.

ಹೃದ್ರೋಗ ತಜ್ಞರಾದ ಡಾ.ಶರತ್ ಕುಮಾರ್, ಜೆ.ವಿ, ಮೆಡಿಕಲ್ ಸೂಪರಿಂಟೆಂಡೆಂಟ್ ಡಾ.ನಿರಂಜನಮೂರ್ತಿ, ನರ್ಸಿಂಗ್ ವಿಭಾಗದ ಮುಖ್ಯಸ್ಥ ನಾಗಣ್ಣ, ಟೆಕ್ನಿಷಿಯನ್ ಪೂನಂ, ಮೊಹಮದ್ ನಯೀಂವುದ್ದೀನ್ ಇನ್ನಿತರರು ಇದ್ದರು.

## ೨೪ ಗಂಟಯಲ್ಲಿ ೮ ಹೃದಯ ಶಸ್ತ್ರಚಿಕಿತ್ಸೆಗಳು

ಸಿದ್ಧಗಂಗಾ ಆಸ್ಪತ್ರೆ ವಿಶ್ವದರ್ಜೆಯ ಹೃದ್ರೋಗ ವಿಭಾಗವನ್ನು ಹೊಂದಿದ್ದು ಇತ್ತೀಚಗೆ ವಿಸ್ತರಿಸಲಾದ ಸೌಲಭ್ಯಗಳನ್ನು ಬಳಸಿಕೊಂಡು ಕೇವಲ ೨೪ ಗಂಟೆಯಲ್ಲಿ ಎಲ್ಲಾ ವಯೋಮಾನದ ಹೃದಯಕ್ಕೆ ಸಂಬಂಧಿಸಿದ ಕ್ಲಿಷ್ಟಕರ ಹಾಗೂ ವಿಭಿನ್ನ ರೀತಿಯ ಶಸ್ತ್ರಚಿಕಿತ್ಸೆಗಳನ್ನು ಯಶಸ್ವಿಯಾಗಿ ನಡೆಸಲಾಗಿದೆ ಎಂದು ಸಿದ್ಧಗಂಗಾ ಆಸ್ಪತ್ರೆ ನಿರ್ದೇಶಕ ಡಾ.ಎಸ್.ಪರಮೇಶ್ ತಿಳಿಸಿದರು.

ಸಿದ್ಧಗಂಗಾ ಆಸ್ಪತ್ರೆಯಲ್ಲಿ ಮಾಧ್ಯಮಗಳನ್ನು ಉದ್ದೇಶಿಸಿ ಮಾತನಾಡಿದ ಅವರು ಈಗಾಗಲೇ ನಾವು ಅಡ್ವಾನ್ಸ್ ಕ್ಯಾಥ್ ಲ್ಯಾಬ್ ಹಾಗೂ ಎಕೋ ಮಿಷಿನ್ ಹೊಂದಿದ್ದು ಮುಂದಿನ ದಿನಗಳಲ್ಲಿ ತೆರದ ಹೃದಯ ಆಪರೇಷನ್ ಗೆ ಎಲ್ಲಾ ಸಿದ್ಧತೆಗಳನ್ನು ನಡೆಸಲಾಗಿದೆ ಎಂದರು.

ಹಿರಿಯ ಹೃದ್ರೋಗ ತಜ್ಞರಾದ ಡಾ.ಭಾನುಪ್ರಕಾಶ್ ಹೆಚ್.ಎಂ. ಮಾತನಾಡಿ ನಾನು ಹಾಗೂ ನಮ್ಮ ತಂಡದ ನೆರವಿನಿಂದ ಈ ಯಶಸ್ವಿ ಶಸ್ತ್ರಚಿಕಿತ್ಸೆ ನಡೆಸಲಾಗಿದೆ. ೭೫ ವರ್ಷದ ವೃದ್ಧರಿಗೆ ಕೆರೋಟಿಡ್ ಆಂಜಿಯೋಪ್ಲಾಸ್ಟಿ (ಮೆದುಳಿನ ರಕ್ತನಾಳ) ನಡೆಸಿದ್ದು, ೨೨ ವರ್ಷದ ಕಾರ್ಡಿಯಾಕ್ ಅರೆಸ್ಟ್ ಆದ ಯುವಕನಿಗೆ ಆಂಜೀಯೋಪ್ಲಾಸ್ಟಿ ಮಾಡಿದ್ದು, ೩೭ ವರ್ಷದ ಹೃದಯಾಘಾತದಿಂದ ಬಂದ ಯುವಕನಿಗೆ ಲೆಫ್ಟ್ ಮೈನ್ ಆಂಜಿಯೋಪ್ಲಾಸ್ಟಿ.

೭೬ ವರ್ಷದ ವೃದ್ಧೆಗೆ ಡ್ಯುಯಲ್ ಚೇಂಬರ್ ಪೇಸ್‌ಮೇಕರ್, ಹೃದಯ ಸ್ತಂಭನಕ್ಕೆ ಒಳಗಾಗಿ ತುರ್ತು ಪರಿಸ್ಥಿತಿಯಲ್ಲಿ ಬಂದು ದಾಖಲಾದ, ೩೭ ವರ್ಷದ ಕಾರ್ಡಿಯೋ ಮಯೋಪತಿ ಯುವಕನಿಗೆ ಎಐಸಿಡಿ ಪೇಸ್ ಮೇಕರ್, ೯೦ ವರ್ಷದ ವೃದ್ಧರಿಗೆ ಪ್ರೈಮರಿ ಆಂಜಿಯೋಪ್ಲಾಸ್ಟಿ ನಡೆಸಿದ್ದು ಈ ಎಲ್ಲಾ ಚಿಕಿತ್ಸೆಗಳನ್ನು ಯಶಸ್ವಿಯಾಗಿ ನಿರ್ವಹಿಸಿದ ಹೆಮ್ಮೆ ನಮ್ಮ ತಂಡಕ್ಕಿದೆ ಎಂದರು.





ಡಾ.ಶರತ್ ಕುಮಾರ್ ಜೆ.ವಿ ಮಾತನಾಡಿ ಇಂತಹ ಕ್ಲಿಷ್ಟಕರ ಹೃದಯ ಚಿಕಿತ್ಸೆ ನಡೆಸುವಾಗ ರೋಗಿಗಳ ಸ್ಪಂದನೆ ಕೂಡ ಮುಖ್ಯವಾಗಿದ್ದು ನಮ್ಮ ತಂಡದ ಮೇಲೆ ನಂಬಿಕೆ ಇಟ್ಟು ಚಿಕಿತ್ಸೆ ಪಡೆದ ಎಲ್ಲರಿಗೂ ಧನ್ಯವಾದ ಹೇಳಿದರು.

## ಅಪರೂಪದ ಕೆರೋಡಿಡ್ ಆಂಜಿಯೋಪ್ಲಾಸ್ಟಿ ಶಸ್ತ್ರಚಿಕಿತ್ಸೆ

ಮೆದುಳಿಗೆ ರಕ್ತ ಪೂರೈಸುವ ರಕ್ತನಾಳ ಶೇ.೯೦ ರಷ್ಟು ಮುಚ್ಚಿದ್ದಂತಹ ವ್ಯಕ್ತಿಗೆ ಕೆರೋಟಿಡ್ ಆಂಜಿಯೋಪ್ಲಾಸ್ಟಿ ಮೂಲಕ ಜೀವ ಹಾನಿ ತಪ್ಪಿಸಿದ್ದು ನಮ್ಮ ಆಸ್ಪತ್ರೆ ತುರ್ತು ಚಿಕಿತ್ಸೆಗೆ ಸಂಬಂಧಿಸಿದ ಎಲ್ಲಾ ಶಸ್ತ್ರಚಿಕಿತ್ಸೆ ನಡೆಸುವಲ್ಲಿ ಸಮರ್ಥವಾಗಿದೆ ಎಂದು ಸಿದ್ಧಗಂಗಾ ಆಸ್ಪತ್ರೆ ನಿರ್ದೇಶಕ ಡಾ.ಎಸ್.ಪರಮೇಶ್ ತಿಳಿಸಿದ್ದಾರೆ.

ಸಿದ್ಧಗಂಗಾ ಆಸ್ಪತ್ರೆಯಲ್ಲಿ ಮಾಧ್ಯಮದವರೊಂದಿಗೆ ಮಾತನಾಡಿದ ಅವರು ಆಂಜಿಯೋಪ್ಲಾಸ್ಟಿಗೆ ಒಳಗಾದ ೭೫ ವರ್ಷದ ಸುಭಾಷ್ ಮಸ್ಕಿಯವರು ಕೇವಲ ೨೪ ಗಂಟೆಯಲ್ಲಿಯೇ ಡಿಸ್ಚಾರ್ಜ್ ಆಗಿದ್ದಾರೆ. ಇಂತಹ ಶಸ್ತ್ರಚಿಕಿತ್ಸೆಗಳು ನಮ್ಮ ಆತ್ಮವಿಶ್ವಾಸ ಹೆಚ್ಚಿಸಿವೆ ಎಂದರು.

ಹೃದ್ರೋಗ ತಜ್ಞ ಡಾ.ಭಾನುಪ್ರಕಾಶ್ ಹೆಚ್.ಎಂ ಮಾತನಾಡಿ ಇಂತಹ ಆಪರೇಷನ್ ಮಾಡುವಾಗ ಬಹಳ ಮುತುವರ್ಜಿ ವಹಿಸಬೇಕು, ಕೊಬ್ಬಿನಾಂಶ ತುಂಬಿರುವ ಮೆದುಳಿನಲ್ಲಿ ರಕ್ತನಾಳಗಳನ್ನು ಸರಿಪಡಿಸುವಾಗ ಕೊಂಚ ವ್ಯತ್ಯಾಸವಾದರೂ ವ್ಯಕ್ತಿಗೆ ಸ್ಟ್ರೋಕ್ ನಂತಹ ಅಪಾಯಕ್ಕೆ ಒಳಗಾಗುವ ಸಾಧ್ಯತೆಯಿದ್ದು ನಮ್ಮ ತಂಡದ ಪರಿಶ್ರಮದಿಂದ ಯಶಸ್ವಿಯಾಗಿ ಶಸ್ತ್ರಚಿಕಿತ್ಸೆ ನಡೆಸಲಾಗಿದೆ. ಇತ್ತೀಚಿನ ದಿನಗಳಿಂದ ಇಂತಹ ಸಮಸ್ಯೆಗಳು ಹೆಚ್ಚುತ್ತಿದ್ದು ಆರೋಗ್ಯದ ಬಗ್ಗೆ ಹೆಚ್ಚು ಕಾಳಜಿ ವಹಿಸಿ ಸರಿಯಾದ ಸಮಯಕ್ಕೆ ಚಿಕಿತ್ಸೆ ಪಡೆಯಬೇಕು ಎಂದು ಹೇಳಿದರು.

ಕೆರೋಟಿಡ್ ಆಂಜಿಯೋಪ್ಲಾಸ್ಟಿಗೆ ಒಳಗಾದ ಮಸ್ಕಿಯವರು ಮಾತನಾಡಿ ಸಿದ್ಧಗಂಗಾ ಆಸ್ಪತ್ರೆಯ ವೈದ್ಯರು ನನಗೆ ಮರುಜೀವ ನೀಡಿದ್ದು ಆಸ್ಪತ್ರೆಯ ವೈದ್ಯರ ಸೇವೆಗೆ ಅಭಿನಂದನೆ ಸಲ್ಲಿಸುತ್ತೇನೆ ಎಂದರು. ಹೃದ್ರೋಗ ತಜ್ಞ ಡಾ.ಶರತ್ ಕುಮಾರ್ ಜೆ.ವಿ, ಪಿಆರ್‌ಓ ಕಾಂತರಾಜು, ಸುಭಾಷ್ ಮಸ್ಕಿ ಕುಟುಂಬಸ್ಥರು ಉಪಸ್ಥಿತರಿದ್ದರು

## ದೊಡ್ಡಸಾಗ್ಗೆರೆಯಲ್ಲಿ ಬೃಹತ್ ಆರೋಗ್ಯ ಶಿಬಿರ



ಗ್ರಾಮೀಣ ಜನರು ತಮ್ಮ ಆರೋಗ್ಯದ ಬಗ್ಗೆ ಕಾಳಜಿ ವಹಿಸಿ ನಿರಂತರ ಆರೋಗ್ಯ ಪರೀಕ್ಷೆಗೆ ಒಳಗಾಗುವುದರಿಂದ ಭವಿಷ್ಯದ ಆರೋಗ್ಯ ಅಪಾಯಗಳನ್ನು ತಪ್ಪಿಸಬಹುದು ಎಂದು ಸಿದ್ಧಗಂಗಾ ಆಸ್ಪತ್ರೆ ನಿರ್ದೇಶಕ ಡಾ.ಎಸ್.ಪರಮೇಶ್ ತಿಳಿಸಿದರು.

ಸಿದ್ಧಗಂಗಾ ಆಸ್ಪತ್ರೆ, ದೊಡ್ಡಸಾಗ್ಗೆರೆ ಗ್ರಾಪಂ, ಬಸವೇಶ್ವರ ಗ್ರಾಮಾಂತರ ಪ್ರೌಢಶಾಲೆ ವತಿಯಿಂದ ಬಸವೇಶ್ವರ ಗ್ರಾಮಾಂತರ ಪ್ರೌಢಶಾಲೆಯಲ್ಲಿ ಮೇ ೨೭ ರಂದು ಉಚಿತ ಆರೋಗ್ಯ ಶಿಬಿರ ಉದ್ಘಾಟಿಸಿ ಮಾತನಾಡಿ ಸಿದ್ಧಗಂಗಾ ಆಸ್ಪತ್ರೆಯಲ್ಲಿ ಪ್ರಾಥಮಿಕ ಆರೋಗ್ಯ ಪರೀಕ್ಷೆ ಹಾಗೂ ಉಚಿತ ಒಪಿಡಿ ಸೇವೆ ನೀಡುತ್ತಿದ್ದು ಮೆಡಿಕಲ್ ಕಾಲೇಜಿನ ಮೂಲಕ ವೈದ್ಯಕೀಯ ಸೇವೆ ವಿಸ್ತರಿಸುತ್ತಿದೆ ಎಂದರು.ಪ್ರೌಢಶಾಲೆಯ ಮುಖ್ಯಶಿಕ್ಷಕ ಚಂದ್ರಯ್ಯ ಪ್ರಾಸ್ತಾವಿಕವಾಗಿ ಮಾತನಾಡಿ ಸಿದ್ಧಗಂಗಾ ಅಸ್ಪತ್ರೆ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರ ಆಶೀರ್ವಾದಿಂದ ಆರಂಭವಾಗಿ ಸಾರ್ವಜನಿಕರಿಗೆ ಉಚಿತ ಆರೋಗ್ಯ ಶಿಬಿರಗಳ ಮೂಲಕ ಜನರ ಮನೆ ಮನೆ ಬಾಗಿಲಿಗೆ ತಲುಪಿ ಆರೋಗ್ಯ ದಾಸೋಹ ನೀಡುತ್ತಿದ್ದು ಶ್ರೇಷ್ಠ ಸೇವೆಗೆ ಹೆಸರಾಗಿದೆ ಎಂದರು.

ಇದೇ ವೇಳೆ ಗ್ರಾಮದ ೨೦೦ ಕ್ಕೂ ಹೆಚ್ಚು ಜನರಿಗೆ ೧೦ ಕ್ಕೂ ಹೆಚ್ಚು ವಿಭಾಗಗಳಲ್ಲಿ ಆರೋಗ್ಯ ಪರೀಕ್ಷೆ ನಡೆಸಲಾಯಿತು.

ಈ ಸಂದರ್ಭದಲ್ಲಿ ಆಸ್ಪತ್ರೆಯ ವೈದ್ಯರಾದ ಡಾ.ಅಪರೂಪ, ಡಾ.ಆದರ್ಶ್, ಡಾ.ಮನಸ್ವಿ, ಡಾ.ಮಾನಸ, ಡಾ.ಮನೋಜ್‌ಕುಮಾರ್, ಡಾ.ಕಾವ್ಯ, ಪಿಆರ್ ಓ ಕಾಂತರಾಜು, ಗ್ರಾಪಂ ಪಿಡಿಓ ಉಮೇಶ್, ಅಧ್ಯಕ್ಷ ರಾಮಣ್ಣ, ಮುಖಂಡ ವಿ.ಎನ್.ಮಂಜುನಾಥ್, ಸದಸ್ಯರಾದ ನಾಗೇಶ್, ನಾಗರಾಜು, ಹೆಚ್.ಎಂ.ಚಂದ್ರಯ್ಯ, ಮಾರ್ಕೆಟಿಂಗ್ ವಿಭಾಗದ ಶಿವಕುಮಾರ್ ಹಾಗೂ ಗ್ರಾಮಸ್ಥರು ಉಪಸ್ಥಿತರಿದ್ದರು.

**ವರದಿ : ಕಾಂತರಾಜು, ಪಿಆರ್‌ಓ, ಸಿದ್ಧಗಂಗಾ ಆಸ್ಪತ್ರೆ**

ವರದಿ

# ಕೆಂಗೇರಿ ಬಿಲ್ವಪತ್ರೆ ಬಂಡೇಮಠದ ಪರಮಪೂಜ್ಯ ಶ್ರೀ ಶ್ರೀ ಸಚ್ಚಿದಾನಂದ ಮಹಾಸ್ವಾಮಿಗಳವರ ಪೀಠಾಧಿಕಾರದ ಸುವರ್ಣ ಮಹೋತ್ಸವ ಸಂಭ್ರಮ

ಜೂನ್ ೫ ರಂದು ಕೆಂಗೇರಿಯಲ್ಲಿರುವ ಬಿಲ್ವಪತ್ರೆ ಬಂಡೇಮಠದಲ್ಲಿ ಪೀಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಚ್ಚಿದಾನಂದ ಮಹಾಸ್ವಾಮಿಗಳವರ ಸುವರ್ಣ ಮಹೋತ್ಸವ ಸಮಾರಂಭ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹಾಗೂ ಶ್ರೀ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಗಣ್ಯರು, ಸಾವಿರಾರು ಜನ ಮಠದ ಸದ್ಭಕ್ತರು ಹಾಗೂ ಅಭಿಮಾನಿಗಳ ಸಮ್ಮುಖದಲ್ಲಿ ಅರ್ಥಪೂರ್ಣವಾಗಿ ಆಚರಿಸಲಾಯಿತು.



ಪರಮಪೂಜ್ಯ ಶ್ರೀ ಶ್ರೀ ಸಚ್ಚಿದಾನಂದ ಮಹಾಸ್ವಾಮಿಗಳವರಿಗೆ ಗೌರವ ಸಮರ್ಪಣೆ

ಬಂಡೇಮಠಕ್ಕೆ ಸುಮಾರು ಎಂಟು ನೂರು ವರ್ಷಗಳ ಇತಿಹಾಸವಿದೆ, ಭವ್ಯ ಪರಂಪರೆಯಿದೆ. ಹನ್ನೆರಡನೆ ಶತಮಾನದಲ್ಲಿ ಶರಣರ ಕ್ರಾಂತಿಯ ನಂತರ ಪೂಜ್ಯ ಶ್ರೀ ಚನ್ನವೀರ ಸ್ವಾಮಿಗಳವರು ತಪೋನುಷ್ಠಾನಕ್ಕೆ ಯೋಗ್ಯವಾಗಿದ್ದ ಈ ಸ್ಥಳದಲ್ಲಿ ಬಂದು ನೆಲಸಿ ತಪೋನುಷ್ಠಾನ ಮಾಡಿ ಪುಣ್ಯಭೂಮಿಯನ್ನಾಗಿಸಿದ ಸ್ಥಳವೇ ಈಗಿನ ಬಂಡೇಮಠ. ಅಂದಿನ ಶ್ರೀಗಳು ರೋಗಪೀಡಿತರಿಗೆ ಗಿಡಮೂಲಿಕೆಗಳಿಂದ ಔಷಧಿ ನೀಡುತ್ತಿದ್ದು, ಇದರಿಂದ ಎಲ್ಲಾ ರೀತಿಯ ಕಾಯಿಲೆಗಳು ಗುಣವಾಗುತ್ತಿದ್ದವೆಂದು ಇತಿಹಾಸದಿಂದ ತಿಳಿದುಬರುತ್ತದೆ. ಅಂದಿನ ಮೈಸೂರು ಅರಸರು ತಮ್ಮ ದೇಹವನ್ನು ಆವರಿಸಿದ್ದ ಚರ್ಮರೋಗಕ್ಕೆ ಔಷಧಿ ಪಡೆದು ಗುಣಮುಖರಾಗಿದ್ದರಂತೆ.

ಪ್ರಸ್ತುತ ಕೆಂಗೇರಿ ಉಪನಗರಕ್ಕೆ ಹೊಂದಿಕೊಂಡಿರುವ ಕೊಮ್ಮಘಟ್ಟ ರಸ್ತೆಯಲ್ಲಿರುವ ಈ ಮಠ ಸಮಾಜಮುಖಿ ಕಾರ್ಯಗಳಿಂದ ಭಕ್ತರ ಸಂಖ್ಯೆ ಹೆಚ್ಚಾಗಿ ಪ್ರಗತಿ ಪಥದಲ್ಲಿ ಮುನ್ನಡೆಯುವಂತಾಯಿತು. ಇಂದಿನ ಪೀಠಾಧ್ಯಕ್ಷರಾಗಿರುವ ಪರಮಪೂಜ್ಯ ಶ್ರೀ ಶ್ರೀ ಸಚ್ಚಿದಾನಂದ ಮಹಾಸ್ವಾಮಿಗಳವರ ಕ್ರಿಯಾಶೀಲತೆ, ದೂರದೃಷ್ಟಿ, ಕಳಕಳಿಯಿಂದ ಮಠವನ್ನು ಅಭಿವೃದ್ಧಿ ಪಥದಲ್ಲಿ ಮುನ್ನಡೆಸುತ್ತಾ ಬಂದಿದ್ದಾರೆ.



ಲಭ್ಯವಿರುವ ಮಾಹಿತಿಯಂತೆ ಶ್ರೀಮಠದ ಗುರುಪರಂಪರೆಯಲ್ಲಿ ೧೪ನೇ ಪೀಠಾಧಿಪತಿಯಾಗಿರುವ ಪೂಜ್ಯ ಶ್ರೀ ಸಚ್ಚಿದಾನಂದ ಸ್ವಾಮಿಗಳವರು ಶ್ರೀಮಠದ ಅಧಿಕಾರ ಚುಕ್ಕಾಣಿಯನ್ನಿಡಿದು ೫೦ ವರ್ಷಗಳು ಸಂದ



ಈ ಶುಭ ಸಂದರ್ಭದಲ್ಲಿ ನೂತನ ಶಾಲೆ, ಕಾಲೇಜು ಕಟ್ಟಡ ಲೋಕಾರ್ಪಣೆಯನ್ನು ಮಾಡಲಾಯಿತು.

ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಶಿವನುಡಿಗಳಲ್ಲಿ "ದೇವರಿಗೆ ಮತ್ತೊಂದು ಹೆಸರೇ ಸಚ್ಚಿದಾನಂದ. ಆ ಹೆಸರನ್ನೇ ಇಟ್ಟುಕೊಂಡಿರುವ ಸ್ವಾಮೀಜಿಗಳು ಆ ದೇವರು ಮೆಚ್ಚುವಂತೆ ಕೆಲಸ



ಮಾಡಿದ್ದಾರೆ. ಬಂಡೇಮಠದಲ್ಲಿ ಕೇವಲ ಬಂಡೆಗಳು ಇದ್ದವು. ಆ ಬಂಡೆಗಳಲ್ಲಿ ಶಿಕ್ಷಣ, ಸಮಾಜ ಸೇವೆ, ಮಠ, ಧರ್ಮ ವೃದ್ಧಿಸುವಂತಹ ಕೆಲಸಗಳನ್ನು ಮಾಡಿ ಚಿನ್ನವನ್ನು ತೆಗೆಯುವಂತಹ ಕೆಲಸವನ್ನು ಕಳೆದ ೫೦ ವರ್ಷಗಳಿಂದ ಮಾಡುತ್ತಾ ಬಂದಿದ್ದಾರೆ. ಶಿಕ್ಷಣ ಕ್ಷೇತ್ರಕ್ಕೆ ಶ್ರೀಗಳ ಕೊಡುಗೆ ಅಪಾರ. ಅವರು ಅನೇಕ ವರ್ಷಗಳ ಕಾಲ ಈ ಸೇವೆಯನ್ನು ಮುಂದುವರಿಸಲಿ" ಎಂದು ಹಾರೈಸಿದರು.

ಸಮಾರಂಭದಲ್ಲಿ ಉಪಸ್ಥಿತರಿದ್ದ ಯಶವಂತಪುರ ವಿಧಾನಸಭಾ ಕ್ಷೇತ್ರದ ಶಾಸಕರೂ, ಸಹಕಾರ ಸಚಿವರೂ ಆದ ಶ್ರೀ ಎಸ್.ಟಿ. ಸೋಮಶೇಖರ್ ಅವರು ಮಾತನಾಡಿ "ಸ್ವಾಮೀಜಿಯವರು ಕಳೆದ ೫೦ ವರ್ಷಗಳಲ್ಲಿ ಬೆಟ್ಟದಷ್ಟು ಕೆಲಸಗಳನ್ನು ಮಾಡಿದ್ದಾರೆ. ಅವರ ಸಮಾಜ ಸೇವೆಯ ದಣಿವು ಇನ್ನೂ ಆರಿಲ್ಲ. ಶಿಕ್ಷಣ, ವ್ಯವಸಾಯ, ಮಠದ ಅಭಿವೃದ್ಧಿ, ಸಮಾಜ ಸೇವೆ ಹೀಗೆ ಯಾವುದೇ ಕೆಲಸ ಮಾಡಲಿ ಅದರಲ್ಲಿ ಗುಣಮಟ್ಟವನ್ನು ಕಾಪಾಡಿಕೊಳ್ಳುವ ಕೆಲಸವನ್ನು ಸ್ವಾಮೀಜಿಯವರು ಮಾಡಿದ್ದಾರೆ. ಇದನ್ನು ನಾನು ಬಹಳ ಹತ್ತಿರದಿಂದ ನೋಡಿದ್ದೇನೆ. ಮಠಗಳು ಶಿಕ್ಷಣ ಕ್ಷೇತ್ರಕ್ಕೆ ಕೊಡುಗೆಗಳನ್ನು ನೀಡದೆ ಹೋಗಿದ್ದರೆ ಸರ್ಕಾರಗಳಿಗೆ ಕಷ್ಟವಾಗುತ್ತಿತ್ತು. ನಾನು ಒಬ್ಬ ಭಕ್ತನಾಗಿ ಹಾಗೂ ಒಬ್ಬ ಸಚಿವನಾಗಿ ಸದಾಕಾಲ ಸ್ವಾಮೀಜಿಯವರ ಎಲ್ಲಾ ಅಭಿವೃದ್ಧಿ ಕಾರ್ಯಗಳಿಗೆ ಜೊತೆಯಲ್ಲಿ ಇರುತ್ತೇನೆ" ಎಂದು ಹೇಳಿದರು.

ಸಮಾರಂಭದಲ್ಲಿ ನೊಣವಿನಕೆರೆ ಪರಮಪೂಜ್ಯ ಡಾ. ಶ್ರೀ ಶ್ರೀ ಕರಿವೃಷಭ ದೇಶಿಕೇಂದ್ರ ಶಿವಯೋಗಿಶ್ವರ ಸ್ವಾಮೀಜಿಯವರು ಸೇರಿದಂತೆ ವಿವಿಧ ಮಠಗಳ ಹರಗುರು ಚರಮೂರ್ತಿಗಳು, ಗಣ್ಯರು ಭಾಗವಹಿಸಿದ್ದರು.




ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕು ಕುದೂರು ಹೋಬಳಿಯ ಕಾಗಿಮಡು ಗ್ರಾಮದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೫ನೇ ಜಯಂತೋತ್ಸವ ಅಂಗವಾಗಿ ಏರ್ಪಡಿಸಿದ್ದ ಗುರುವಂದನ ಕಾರ್ಯಕ್ರಮ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು. ಕಾರ್ಯಕ್ರಮದಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳು, ಸಂಸದರಾದ ಶ್ರೀ ಜಿ.ಎಸ್. ಬಸವರಾಜು, ಶಾಸಕರಾದ ಶ್ರೀ ಎ. ಮಂಜು, ಮಾಜಿ ಸಚಿವರಾದ ಶ್ರೀ ಹೆಚ್.ಎಂ. ರೇವಣ್ಣ, ಮಾಜಿ ಶಾಸಕರಾದ ಶ್ರೀ ಬಾಲಕೃಷ್ಣ, ಕರ್ನಾಟಕ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ನಿಗಮದ ಅಧ್ಯಕ್ಷರಾದ ಶ್ರೀ ರುದ್ರೇಶ್, ಸ್ಥಳೀಯ ಮುಖಂಡರಾದ ಹಾಗೂ ಗ್ರಾಮಸ್ಥರು ಭಾಗವಹಿಸಿದ್ದರು.







## ದಾನಿಗಳ ಪಟ್ಟಿ

ಶ್ರೀ ಸಿದ್ಧಗಂಗಾ ಮಠ, ತುಮಕೂರು

ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೩೩೯೭. | ಶ್ರೀ ಎಂ.ಬಿ. ರಾಮಕೃಷ್ಣಯ್ಯ ಮಾಚೋಹಳ್ಳಿ ಕಾಲೋನಿ. | ೩,೦೦೦ |
| ೩೩೯೮. | ಶ್ರೀ ಎ.ಎಂ. ಸಿದ್ಧಗಂಗಯ್ಯ ಅಂಬಲಗೆರೆ | ೧,೦೦೦ |
| ೩೩೯೯. | ಶ್ರೀ ಬಿ.ಬೊಮ್ಮೇಗೌಡ ಮಂಡ್ಯ | ೧೧,೧೧೧ |
| ೩೪೦೧. | ಶ್ರೀಮತಿ ಗೌರಮ್ಮ ಬಸವರಾಜು ಬೆಂಗಳೂರು | ೫,೦೦೦ |
| ೩೪೦೨. | ಶ್ರೀ ಎಂ.ಎ. ರಾಜಯ್ಯ ಮೈಸೂರು | ೫,೦೦೦ |
| ೩೪೦೩. | ಶ್ರೀ ಡಿ.ಬಿ. ಫಣಿಭೂಷಣ ಬೆಂಗಳೂರು | ೨,೫೦೦ |
| ೩೪೦೪. | ಶ್ರೀ ಹೊನ್ನಸಿದ್ಧಯ್ಯ ಕಡಸೀಗೊಪ್ಪ | ೧,೦೦೦ |
| ೩೪೦೫. | ಡಾ॥ ಬಿ.ಎಸ್. ಮಾಳವಾಡ್ ಹುಬ್ಬಳ್ಳಿ | ೫,೦೦೧ |
| ೩೪೦೬. | ಡಾ॥ ಜಿ. ಸಂತೋಷ್‌ಕುಮಾರ್ ರಾಣೇಬೆನ್ನೂರು. | ೫,೦೦೨ |
| ೩೪೦೭. | ಶ್ರೀ ಮಾದು ಪಾಂಡವಪುರ. | ೫,೦೦೦ |
| ೩೪೦೮. | ಶ್ರೀ ಜಿ. ಗುರುಬಸಪ್ಪ ಬೆಂಗಳೂರು | ೫೦,೦೦೧ |
| ೩೪೦೯. | ಶ್ರೀ ಮಲ್ಲಿಕಾರ್ಜುನ ಒಡೆಯರ್ ಬೆಟ್ಟಹಳ್ಳಿ ಸೂರು | ೨,೦೦೦ |
| ೩೪೧೦. | ಶ್ರೀ ಅಣ್ಣಾರಾವ್ ಬೆಂಗಳೂರು | ೧೦,೦೦೦ |
| ೩೪೧೧. | ಶ್ರೀ ಎಸ್.ಹೆಚ್. ಕೆಂಪಣ್ಣ ಹಳೇನಿಜಗಲ್ | ೨,೦೦೧ |
| ೩೪೧೨. | ಶ್ರೀ ಭರತ್‌ಭೂಷಣ ಬೆಂಗಳೂರು | ೫,೦೦೦ |
| ೩೪೧೩. | ಶ್ರೀ ಎಂ.ಪಿ. ಪ್ರಭು ಬಿ.ವಿ. ಬಡಾವಣೆ. | ೫,೦೦೧ |
| ೩೪೧೪. | ಶ್ರೀ ಎಂ. ಕೃಷ್ಣ ಹೆಗಲೂರು | ೨,೦೦೦ |
| ೩೪೧೫. | ಶ್ರೀ ಕೆ.ಆರ್. ರಾಮದಾಸ್ ನಿಟ್ಟೂರು | ೫,೦೦೧ |
| ೩೪೧೬. | ಶ್ರೀ ಈ ರಾಜಾ ನಿಟ್ಟೂರು | ೫,೦೦೧ |
| ೩೪೧೭. | ಶ್ರೀ ಪಿ. ಚಿನ್ನಪ್ಪ ಸಿರಾಗೇಟ್. | ೧,೦೦೦ |
| ೩೪೧೮. | ಶ್ರೀ ಸುರೇಶ್ ಕಾರ್ವಿಕರ ಸಿರಾಗೇಟ್. | ೫,೦೦೧ |
| ೩೪೧೯. | ಶ್ರೀ ಹೆಚ್.ಎಂ. ಬಸಪ್ಪ ಬೆಂಗಳೂರು | ೨,೫೦೦ |
| ೩೪೨೦. | ಶ್ರೀ ಪ್ರಕಾಶ್ ಎಚ್.ಹೆಚ್.ಬ್. ಯರಗೋಡ್ ಬೆಂಗಳೂರು | ೧,೦೦೦ |
| ೩೪೨೧. | ಶ್ರೀ ಜಯಪ್ಪ ಎಸ್. ದಾವಣಗೆರೆ. | ೧೦,೦೦೦ |
| ೩೪೨೨. | ಶ್ರೀ ಸಿ.ಹೆಚ್. ಸಿದ್ಧಪ್ಪ ದಾವಣಗೆರೆ. | ೮೧,೦೦೦ |
| ೩೪೨೩. | ಶ್ರೀ ಕೆ.ಎಸ್. ಲಿಂಗದೇವರು ಬೆಂಗಳೂರು | ೨೫,೦೦೦ |
| ೩೪೨೪. | ಶ್ರೀ ಎ.ಹೆಚ್. ಪ್ರಸನ್ನಕುಮಾರ ನೇರಳೇಕೆರೆ. | ೫೦,೦೦೦ |
| ೩೪೨೫. | ಶ್ರೀ ನರಸಿಂಹಮೂರ್ತಿ ಕೆ. ಬಂಡೇಪಾಳ್ಯ | ೫,೦೦೧ |
| ೩೪೨೬. | ಶ್ರೀ ಹೆಚ್.ಆರ್. ವೀಣಾ ಡಿ.ಬಿ. ಪುರ. | ೨,೦೦೦ |
| ೩೪೨೭. | ಶ್ರೀ ಎಂ.ಎ. ಟೀಕೇಶ್ವರಯ್ಯ ಟಿ. ಮಾಯಗೊಂಡನಹಳ್ಳಿ. | ೧,೦೦೦ |
| ೩೪೨೮. | ಶ್ರೀ ಟಿ. ಚಂದ್ರಶೇಖರಯ್ಯ ತುಮಕೂರು. | ೫೦,೦೦೦ |
| ೩೪೨೯. | ಶ್ರೀ ಎಂ. ರಾಮಸ್ವಾಮಿರೆಡ್ಡಿ ಬೆಂಗಳೂರು | ೨೫,೦೦೦ |
| ೩೪೩೦. | ಶ್ರೀ ಆರ್. ಪುಟ್ಟಗಂಗಿ ಶಿವಮೊಗ್ಗ | ೨,೦೦೦ |
| ೩೪೩೧. | ಶ್ರೀ ಸಿದ್ಧರಾಮ ಗುರುಮಠ ಹೂಗಾರ ಬಾಪುಡ್ | ೧೧,೧೨೦ |
| ೩೪೩೨. | ಶ್ರೀ ಬಿ.ಸಿ. ಭುವನೇಶ್ವರಿ ಬೆಂಗಳೂರು | ೪೦,೦೦೦ |

ಮುಂದುವರೆಯುತ್ತದೆ....

"Siddaganga" Monthly - Postal Reg. No. L2/RNP/385/TMR/2021-23
Posted at RMS, Tumkur-572 102

RNI No. 17139/69













To



If undelivered please return to :
Editor
Siddaganga Monthly Magazine
Siddaganga Math
Tumkur-572 104

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru-10, Ph : 23404232

email ID : geetanjaligraphics@gmail.com